KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೦, ೨೦೦೯ (ಭಾದ್ರಪದ ೧೯, ಶಕ ವರ್ಷ ೧೯೩೧) | ಸಂಚಿಕೆ ೩೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಪರಿಷ್ಕೃತ) ಕನ್ನಡ ಆವೃತ್ತಿಯನ್ನು (2006) ಆಂಗ್ಲ ಭಾಷೆಗೆ ಭಾಷಾಂತರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಇವರ ಪತ್ರ ಸಂ:ಕಗ್ಯಾಇ/ದಕಜಿಗ್ಯಾ/ 2009–10 ದಿ: 21.05.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 21–5–2009ರ ಪತ್ರದಲ್ಲಿ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಪರಿಷ್ಕೃತ) ಕನ್ನಡ ಆವೃತ್ತಿಯನ್ನು ಆಂಗ್ಲ ಭಾಷೆಗೆ ಭಾಷಾಂತರಿಸಲು ಉದ್ದೇಶಿಸಿದ್ದು, ಇದಕ್ಕೆ ತಗಲುವ ರೂ.1.50ಲಕ್ಷಗಳನ್ನು 2009–10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಭರಿಸಲು ಅವಕಾಶ ಕಲ್ಪಿಸಿಕೊಂಡಿದ್ದು, ಮೇಲ್ಕಂಡ ಭಾಷಾಂತರ ಕಾರ್ಯಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಬೇಕೆಂದು ಕೋರಿರುತ್ತಾರೆ. ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 6 ಕರಾಗೆ 2009, ಬೆಂಗಳೂರು ದಿನಾಂಕ: 18ನೇ ಜುಲೈ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಪರಿಷ್ಕೃತ) ಕನ್ನಡ ಆವೃತ್ತಿಯನ್ನು ಆಂಗ್ಲ ಭಾಷೆಗೆ ಭಾಷಾಂತರಿಸಲು ರೂ.1,50,000–00 (ರೂಪಾಯಿ ಒಂದು ಲಕ್ಷ ಐವತ್ತು ಸಾವಿರ ಮಾತ್ರ)ಗಳನ್ನು ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ಅದರ ನಿಯಮ 2000ನ್ನು ಅನುಸರಿಸುವುದು.

ಈ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 3454–02–110–0–01–059 ಇತರೆ ಖರ್ಚು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಟಿಪ್ಪಣಿ ಸಂ: ಶಿಇ 1313 ಐಎಫ್(ಬಿ.ಎ) 2009 ದಿ: 25–6–2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂ:ಎಫ್.ಡಿ. 1 ಟಿ.ಎಫ್.ಪಿ 96 ದಿನಾಂಕ:10–7–96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1747

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ತಮಿಳುನಾಡು ರಾಜ್ಯದ ಚೆನ್ನೈ ಮಹಾನಗರದಲ್ಲಿ ವಿಶ್ವಕವಿ ಸರ್ವಜ್ಞ ರವರ ಪುತ್ಥಳಿ ಸ್ಥಾಪನೆ ಕಾಮಗಾರಿಯ ರೇಖಾ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸನಿ 128 ಪ್ರತಿಮೆ 1999–2000 ದಿನಾಂಕ 24.10.2008.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸಇ 4 ನಿಆಶಾ 2009–10, ದಿನಾಂಕ 14.07.2009.
3. ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಇವರ ಪತ್ರ ಸಂಖ್ಯೆ ಲೋಇ 248 ಬಿಎಂಎಸ್ 2009 ಸರ್ವಜ್ಞ ಮೂರ್ತಿ:ಅಂದಾಜು:09–10, ದಿನಾಂಕ 14.07.2009.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರು ಸುಮಾರು 18 ವರ್ಷಗಳಿಂದ ನೆನೆಗುದಿಗೆ ಬಿದ್ದ ಬೆಂಗಳೂರಿನ ಹಲಸೂರಿನ ಕೆರೆ ಸಮೀಪ ತಿರುವಳ್ಳರ್ ಪ್ರತಿಮೆ, ಚೆನ್ನೈನಲ್ಲಿ ಸರ್ವಜ್ಞ ಪ್ರತಿಮೆಗಳು ಅನಾವರಣ ಆಗುವ ವಿಷಯವು ಸೌಹಾರ್ದಯುತವಾಗಿ ಬಗೆಹರಿಯುವಂತೆ ಸನ್ಮಾನ್ಯ ಮುಖ್ಯಮಂತ್ರಿಗಳು ಕ್ರಮಕೈಗೊಳ್ಳಲು ಸೂಚಿಸಿರುವ ಹಿನ್ನೆಲೆಯಲ್ಲಿ ಸೂಕ್ತವಾದ ರೇಖಾ ಅಂದಾಜು ಪಟ್ಟಿಯನ್ನು ತಯಾರಿಸಿ, ಮತ್ತು ಸಮಾರಂಭಕ್ಕೆ ಉತ್ತಮ ವ್ಯವಸ್ಥೆಗಳನ್ನು ಮಾಡಲು ಕಾರ್ಯನಿರ್ವಾಹಕ ಇಂಜಿನಿಯರ್, ಲೊಕೋಪಯೋಗಿ ಇಲಾಖೆ, ಕೋಲಾರ ಜಿಲ್ಲೆ, ಕೋಲಾರ ಇವರಿಗೆ ಪತ್ರವನ್ನು ಬರೆದು, ಮಾಹಿತಿಗಾಗಿ ಸರ್ಕಾರಕ್ಕೆ ತಿಳಿಸಿರುತ್ತಾರೆ ಹಾಗೂ ಅಗತ್ಯವಾದ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಬೆಂಗಳೂರು ಇವರು ತಮಿಳುನಾಡು ರಾಜ್ಯದ ಚೆನ್ನೈ ಮಹಾನಗರದಲ್ಲಿ ವಿಶ್ವಕವಿ ಸರ್ವಜ್ಞ ರವರ ಪುತ್ಥಳಿಯನ್ನು ಸ್ಥಾಪಿಸುವ ಕಾಮಗಾರಿಗೆ ರೇಖಾ ಅಂದಾಜನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು ದಕ್ಷಿಣ, ಬೆಂಗಳೂರು ಇವರು ರೂ.60.00 ಲಕ್ಷಗಳಿಗೆ ತಯಾರಿಸಿ, ಸಲ್ಲಿಸಿರುತ್ತಾರೆಂದು ತಿಳಿಸಿ, ಈ ರೇಖಾ ಅಂದಾಜು ಪಟ್ಟಿಗೆ (2009–10ನೇ ಸಾಲಿನ ದರಪಟ್ಟಿಯಂತೆ) ಆಡಳಿತಾತ್ಮಕ ಅನುಮೋದನೆ ನೀಡಿ, ಅನುದಾನವನ್ನು ಒದಗಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 40 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಮೇಲಿನ ಪ್ರಸ್ತಾವನೆಯ ಅಂಶಗಳನ್ನೊಳಗೊಂಡು ತಮಿಳುನಾಡು ರಾಜ್ಯದ ಚೆನ್ನೈ ಮಹಾನಗರದಲ್ಲಿ ವಿಶ್ವಕವಿ ಸರ್ವಜ್ಞ ರವರ ಪುತ್ಥಳಿಯ ಸ್ಥಾಪನೆಗೆ ಹಾಗೂ ಸಮಾರಂಭಕ್ಕೆ ಸೇರಿ ಒಟ್ಟು ರೂ.60.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205–00–102–4–31–059 ಅಡಿಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸರ್ಕಾರದ ಮಂಜೂರಾತಿ ನೀಡಿದೆ. ಪ್ರಸ್ತಾಪಿಸಲಾಗಿರುವ ರೂ.60.00 ಲಕ್ಷಗಳ ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯ ಮೂಲಕ ಕೈಗೊಂಡಿರುವ ಕೆಲಸಗಳನ್ನು 2009–10ನೇ ಸಾಲಿನ ಎಸ್.ಆರ್ ದರಗಳು ಅನ್ವಯಿಸುವುದರಿಂದ ಟೆಂಡರ್ ಪ್ರಿಮಿಯಂ ಕನಿಷ್ಠ ಇರುವಂತೆ ನೋಡಿಕೊಳ್ಳತಕ್ಕದ್ದು ಹಾಗೂ ಸಮಾರಂಭಕ್ಕೆ ನಿಗಧಿ ಪಡಿಸಿದ ವೆಚ್ಚದ ಮೊತ್ತ ಸಹ ಮಿತವಾಗಿರುವಂತೆ ಗಮನವಹಿಸತಕ್ಕದ್ದು.

ಕರ್ನಾಟಕ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರ ಪ್ರಕಾರ ಟೆಂಡರ್ ಪ್ರಕಟಣೆಯನ್ನು ಕೈಗೊಂಡು, ಈ ಪ್ರತಿಮೆ ಸ್ಥಾಪಿಸಲು ಕ್ರಮ ಕೈಗೊಳ್ಳುವುದು. ಈ ಮೊತ್ತವು ಒಂದು ಬಾರಿಯಾಗಿದ್ದು, ಯಾವ ಉದ್ದೇಶಕ್ಕೆ ನೀಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು ಮತ್ತು ನಿಗಧಿತ ಅವಧಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು ಮತ್ತು ಸಂಬಂಧಪಟ್ಟವರು ಮುಂದಿನ ನಿರ್ವಹಣೆಯನ್ನು ನಿರ್ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ ಆಇ 725 ವೆಚ್ಚ–7/2009, ದಿನಾಂಕ 17.07.2009ರ ಹಾಗೂ ಯೋಜನಾ ಇಲಾಖೆಗಳ ಅ.ಟಿ ಸಂಖ್ಯೆ ಪಿಡಿ 67 ಎಂಇ 2009, ದಿನಾಂಕ 22.07.2009ರನ್ವಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1775

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿನ ಖಾಲಿ ಹುದ್ದೆಗಳನ್ನು ಬಾಹ್ಯ ಮೂಲಗಳಿಂದ ಭರ್ತಿ ಮಾಡುವ ಬಗ್ಗೆ– ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು.

**ಓದಲಾಗಿದೆ:**
1. ದಿನಾಂಕ 30.04.2009ರಂದು ಸರ್ಕಾರದ ಕಾರ್ಯದರ್ಶಿಗಳು ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ವೆಂಕಟಪ್ಪ ಚಿತ್ರಶಾಲೆಯ ಸಲಹಾ ಸಮಿತಿ ಸಭೆಯ ನಡವಳಿಗಳು
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಇಎಸ್‌ಟಿ:1:ಕ.ಸಂಖ್ಯೆ:339:ಎ:2009–10/25 ದಿ:08.05.2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸಭೆಯ ನಡವಳಿಯಲ್ಲಿ ವೆಂಕಟಪ್ಪ ಚಿತ್ರಶಾಲೆಯನ್ನು ವ್ಯವಸ್ಥಿತವಾಗಿ ನಿರ್ವಹಿಸಲು ಹೆಚ್ಚಿನ ಸಿಬ್ಬಂದಿಯ ಅವಶ್ಯಕತೆ ಇದೆಯೆಂದು ತಿಳಿಸಿ, ಶ್ರೀ ಎಸ್.ಆರ್. ಹೊನ್ನಲಿಂಗಯ್ಯ, ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ವೆಂಕಟಪ್ಪ ಚಿತ್ರಶಾಲೆಯಲ್ಲಿ ವಿಶೇಷ ಅಧಿಕಾರಿಯಾಗಿ ನೇಮಿಸಿ ಇವರಿಗೆ ಮಾಸಿಕ ರೂ.15,000/– ಗೌರವ ಧನ ನೀಡಬೇಕೆಂದು ನಿರ್ಣಯಿಸಲಾಗಿದೆ. ಅಲ್ಲದೇ, ಅ) ತಾಂತ್ರಿಕ ಸಹಾಯಕ (ಎಲ್.ಸಿ.ಡಿ ಪ್ರೊಜೆಕ್ಟರ್, ಕಂಪ್ಯೂಟರ್, ಧ್ವನಿವರ್ಧಕ ಹಾಗೂ ಸಭಾಂಗಣ ನಿರ್ವಹಣೆಗೆ) ಆ) ಲಿಫ್ಟ್ ಆಪರೇಟರ್ ಇ) ಎ.ಸಿ ಪ್ಲಾಂಟ್ ಆಪರೇಟರ್ ಈ ಮೂರು ಹುದ್ದೆಗಳಿಗೆ ಸಿಬ್ಬಂದಿಗಳನ್ನು ಹೊರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ನಿರ್ಧರಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಡಾ. ಎಸ್. ಆರ್ ಹೊನ್ನಲಿಂಗಯ್ಯ, ನಿವೃತ್ತ ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರನ್ನು ಪ್ರಸ್ತುತ ವೆಂಕಟಪ್ಪ ಚಿತ್ರಶಾಲೆಯಲ್ಲಿ ಖಾಲಿ ಇರುವ ಕ್ಯೂರೇಟರ್ ಹುದ್ದೆಯ ಎದುರಿಗೆ ಭರ್ತಿ ಮಾಡಿಕೊಂಡು ಮಾಸಿಕ ವೇತನ ರೂ.15,000/–ಗಳನ್ನು ನೀಡಲು ಪ್ರಸ್ತಾಪಿಸಿರುವರು. ಅಲ್ಲದೇ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಪ್ರಸ್ತುತ ಖಾಲಿ ಇರುವ ಪುರಾತತ್ವ ಸಂರಕ್ಷಣಾ ಸಹಾಯಕರ ಹುದ್ದೆಯ ಎದುರಿಗೆ ಶ್ರೀ ಲ.ನಾ. ಸ್ವಾಮಿ ಇವರನ್ನು ವಿಶೇಷಾಧಿಕಾರಿಯನ್ನಾಗಿ ಹಾಗೂ ದ್ವಿತೀಯ ದರ್ಜೆಯ ಹುದ್ದೆಯ ಎದುರಿಗೆ ಶ್ರೀ ಶೇಷನಾರಾಯಣ, ಇವರನ್ನು ಅಕ್ಷರಸ್ಥ ಸಹಾಯಕರನ್ನಾಗಿ ಭರ್ತಿ ಮಾಡಿಕೊಂಡು ಇವರುಗಳಿಗೆ ಕ್ರಮವಾಗಿ ಮಾಸಿಕ ರೂ.8,997/– ಗಳ ವೇತನ ನೀಡಲು ಪ್ರಸ್ತಾಪಿಸಿರುವರು. ಅಲ್ಲದೇ ಈ ಮೂರು ಹುದ್ದೆಗಳಿಗೆ ತಗಲುವ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–001 (ಯೋಜನೇತರ) 059– ಇತರೆ ಖರ್ಚುಗಳು ಅಡಿಯಲ್ಲಿ ಭರಿಸಲಾಗುವುದೆಂದು ತಿಳಿಸುತ್ತಾ, ಸದರಿ ಹುದ್ದೆಗಳನ್ನು ಬಾಹ್ಯ ಮೂಲದಿಂದ ಭರ್ತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 88 ಕೆಎಂಯು 2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯಕ್ಕೆ ಈ ಕೆಳಕಂಡ 3 ಹುದ್ದೆಗಳನ್ನು ಪ್ರಾರಂಭಿಕವಾಗಿ ಒಂದು ವರ್ಷದ ಅವಧಿಗೆ ಬಾಹ್ಯ ಮೂಲಗಳಿಂದ ಭರ್ತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ಹುದ್ದೆ, ಸ್ಥಳ ಮತ್ತು ವೇತನ |
|---|---|---|
| 1 | ಡಾ. ಎಸ್. ಆರ್ ಹೊನ್ನಲಿಂಗಯ್ಯ,<br>ನಿವೃತ್ತ ಜಂಟಿ ನಿರ್ದೇಶಕರು,<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ವಿಶೇಷ ಅಧಿಕಾರಿ, ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು.<br>ಮಾಸಿಕ ರೂ.15,000/–(ರೂಪಾಯಿ ಹದಿನೈದು ಸಾವಿರ ಮಾತ್ರ) |
| 2 | ಶ್ರೀ ಲ.ನಾ. ಸ್ವಾಮಿ<br>ನಂ.1063/2004, 9ನೇ ಅಡ್ಡರಸ್ತೆ,<br>2ನೇ ಮುಖ್ಯರಸ್ತೆ, ವಿದ್ಯಾರಣ್ಯಪುರಂ,<br>ಮೈಸೂರು | ವಿಶೇಷಾಧಿಕಾರಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು.<br>ಮಾಸಿಕ ವೇತನ ರೂ.8,997/–(ರೂ. ಎಂಟು ಸಾವಿರ ಒಂಭೈನೂರ ತೊಭತ್ತೇಳು ಮಾತ್ರ) |
| 3 | ಶ್ರೀ ಶೇಷನಾರಾಯಣ,<br>ನಂ. 150, ಗೌರಿಶ್ರೀ, 3ನೇ ಕ್ರಾಸ್,<br>ಸಿದ್ದಲಿಂಗೇಶ್ವರ ಬಡಾವಣೆ, ಜೆ.ಪಿ. ನಗರ,<br>2ನೇ ಹಂತ, ಮೈಸೂರು–570 008 | ಅಕ್ಷರಸ್ಥ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು.<br>ಮಾಸಿಕ ವೇತನ ರೂ.8,997/–(ರೂ. ಎಂಟು ಸಾವಿರ ಒಂಭೈನೂರ ತೊಭತ್ತೇಳು ಮಾತ್ರ) |

ಮೇಲ್ಕಂಡ ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದರ ನಿಯಮಗಳು 2000 ರನ್ವಯ ಪರಿಶೀಲಿಸಿ, ಭರ್ತಿ ಮಾಡಿಕೊಳ್ಳತಕ್ಕದ್ದು.

ಈ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–001 (ಯೋಜನೇತರ) 059 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 628 ವೆಚ್ಚ–7/2009 ದಿನಾಂಕ 20.07.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1837 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿಯಿಂದ ಕೇಂದ್ರ ಕಛೇರಿ, ಬೆಂಗಳೂರಿಗೆ ತಾತ್ಕಾಲಿಕವಾಗಿ ಸ್ಥಳಾಂತರಿಸಿದ ಉಪ ನಿರ್ದೇಶಕರ ಹುದ್ದೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಹಿಂದಕ್ಕೆ ಮೈಸೂರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಇಡಿ 27 ಎಇಎಸ್ 84 ದಿನಾಂಕ 16.06.84
2. ಸರ್ಕಾರದ ಆದೇಶ ಸಂಖ್ಯೆ ಸಂಕಇ 47 ರಾಪಸಿ 97 ದಿನಾಂಕ 01.01.1998
3. ಸರ್ಕಾರದ ಅಧಿಸೂಚನೆ ಸಂಖ್ಯೆ ಕಸಂವಾಪ್ರ 8 ರಾಪಸಿ 2007, ದಿನಾಂಕ 13.12.2007
4. ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಇವರ ಪತ್ರ ಸಂಖ್ಯೆ ಎಆರ್‌ಎಸ್ 5 ಇಎಸ್‌ಟಿ 8(ಭಾ), ದಿನಾಂಕ 06.07.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 16.06.84ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ವಿಭಾಗೀಯ ಪತ್ರಾಗಾರ ಕಛೇರಿಗೆ ಒಂದು ಉಪನಿರ್ದೇಶಕರ ಹುದ್ದೆಯನ್ನು ಸೃಜಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 01.01.1998ರ ಸರ್ಕಾರದ ಆದೇಶದಲ್ಲಿ ಆ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೆ ಕೇಂದ್ರ ಕಛೇರಿ, ಬೆಂಗಳೂರಿಗೆ ಸ್ಥಳಾಂತರಿಸಲಾಗಿತ್ತು.

ಮೇಲೆ (3ರಲ್ಲಿ ಓದಲಾದ ದಿನಾಂಕ 13.12.2007ರ ಅಧಿಸೂಚನೆಯಲ್ಲಿ ಡಾ. ಜೆ.ವಿ. ಗಾಯಿತ್ರಿ, ಪತ್ರಪಾಲಕರು ಇವರಿಗೆ ಉಪನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿ ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇಲ್ಲಿ ಖಾಲಿ ಇರುವ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ದಿನಾಂಕ 06.07.2009ರ ಪತ್ರದಲ್ಲಿ ಈಗ ಮೈಸೂರಿನಲ್ಲಿ ಕೆಲಸದ ಒತ್ತಡವಿರುವುದರಿಂದ, ಕೆಲಸ ಕಾರ್ಯಗಳನ್ನು ಸುಗಮವಾಗಿ ನಿರ್ವಹಿಸಿಕೊಂಡು ಹೋಗಲು ಉಪನಿರ್ದೇಶಕರ ಹುದ್ದೆಯ ಅವಶ್ಯಕತೆ ಇರುತ್ತದೆಯೆಂದು ಉಪನಿರ್ದೇಶಕರ ಹುದ್ದೆಯನ್ನು ಕೇಂದ್ರ ಕಛೇರಿಯಿಂದ ಮೈಸೂರು ವಿಭಾಗಿಯ ಪತ್ರಾಗಾರ ಕಛೇರಿಗೆ ಸ್ಥಳಾಂತರಿಸಬೇಕೆಂದು ಹಾಗೂ ಈ ಹುದ್ದೆಯಲ್ಲಿ ಡಾ. ಜೆ.ವಿ ಗಾಯಿತ್ರಿ, ಉಪನಿರ್ದೇಶಕರು, ಮೈಸೂರು ಇವರನ್ನು ವಿಭಾಗೀಯ ಪತ್ರಾಗಾರ ಕಛೇರಿಯ ಉಪನಿರ್ದೇಶಕರ ಹುದ್ದೆಗೆ ನೇಮಿಸಿ, ಇವರ ಜೊತೆಗೆ ಹೆರಿಟೇಜ್ ಕಛೇರಿಯ ಉಪನಿರ್ದೇಶಕರ ಹುದ್ದೆಯ ಹೆಚ್ಚುವರಿ ಕಾರ್ಯಭಾರವನ್ನು ಮುಂದುವರೆಸಿಕೊಂಡು ಹೋಗಲು ಸೂಚಿಸಬಹುದಾಗಿದೆಂದು ಪ್ರಸ್ತಾಪಿಸಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 12 ರಾಪಸಿ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಕೇಂದ್ರ ಕಛೇರಿ ಇಲ್ಲಿಗೆ ತಾತ್ಕಾಲಿಕವಾಗಿ ಸ್ಥಳಾಂತರಗೊಂಡ ಉಪನಿರ್ದೇಶಕರು, ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು, ಹುದ್ದೆಯನ್ನು ಪುನ: ಮೈಸೂರಿನ ವಿಭಾಗೀಯ ಪತ್ರಾಗಾರ ಕಛೇರಿಗೆ ಸ್ಥಳಾಂತರಿಸಿದೆ.

ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇಲ್ಲಿ ಖಾಲಿ ಇರುವ ಹುದ್ದೆಗೆ ನಿಯೋಜನೆ ಮೇರೆಗೆ ನೇಮಿಸಿರುವ ಡಾ. ಜೆ.ವಿ ಗಾಯಿತ್ರಿ ಅವರ ಸೇವೆಯನ್ನು ಮಾತೃ ಇಲಾಖೆಯಾದ ಕರ್ನಾಟಕ ರಾಜ್ಯ ಪತ್ರಾಗಾರ ಕಛೇರಿ, ಮೈಸೂರು ಇಲ್ಲಿಗೆ ತಕ್ಷಣದಿಂದ ಜಾರಿಗೆ ಬರುವಂತೆ ನಿಯುಕ್ತಿಗೊಳಿಸಿದೆ.

ಡಾ. ಜೆ.ವಿ ಗಾಯಿತ್ರಿ, ಉಪನಿರ್ದೇಶಕರು, ವಿಭಾಗಿಯ ಪತ್ರಗಾರ ಕಛೇರಿ, ಮೈಸೂರು ಇವರನ್ನು ತಕ್ಷಣ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉಪನಿರ್ದೇಶಕರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇಲ್ಲಿ ಹೆಚ್ಚುವರಿ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1877 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಹುದ್ದೆಗಳನ್ನು ದಿನಾಂಕ 1–4–2009 ರಿಂದ 31–3–2010ರವರೆಗೆ ಮುಂದುವರಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 77 ಕೆಎಂಯು 2008 ದಿನಾಂಕ 17.07.2008.

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಇಎಸ್‌ಟಿ:1:ಕ.ಸಂ:338:2009–10/40 ದಿ:05.06.2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 17.07.2008ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೇತರ 26 ಹುದ್ದೆಗಳು ಹಾಗೂ ಯೋಜನೆಯ 7 ಹುದ್ದೆಗಳು ಸೇರಿದಂತೆ ಒಟ್ಟು 33 ಹುದ್ದೆಗಳನ್ನು ದಿನಾಂಕ 31–3–2009ರವರೆಗೆ ಮುಂದುವರೆಸಲಾಗಿದೆ.

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 05.06.2009ರ ಪತ್ರದಲ್ಲಿ ಉಲ್ಲೇಖಿತ ಸರ್ಕಾರದ ಆದೇಶದನ್ವಯ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಹಾಗೂ ಕಮಿಟೆಡ್ ಯೋಜನೇತರ 7 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳ ಮುಂದುವರಿಕೆ ಆದೇಶವು ದಿನಾಂಕ 31.3.2009ಕ್ಕೆ ಅಂತ್ಯಗೊಳ್ಳಲಿದೆ ಎಂದು ತಿಳಿಸಿ, ಕಮಿಟೆಡ್ ಯೋಜನೇತರ 7 ಹುದ್ದೆಗಳು ಹಾಗೂ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ದಿನಾಂಕ 1.4.2009ರಿಂದ 31.3.2010ರವರೆಗಿನ ಅವಧಿಗೆ ಮುಂದುವರಿಸಿ ಅಧಿಕಾರಿ ಹಾಗೂ ಸಿಬ್ಬಂದಿಗಳ ವೇತನ ಪಾವತಿಸಲು ಅನುವಾಗುವಂತೆ ಮುಂದುವರಿಕೆ ಆದೇಶ ಹೊರಡಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 104 ಕೆಎಂಯು 2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಅವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಈ ಕೆಳಕಂಡ ಒಟ್ಟು 33 ಹುದ್ದೆಗಳನ್ನು ದಿನಾಂಕ 1–4–2009ರಿಂದ 31–3–2010ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

1. ಲೆಕ್ಕಶೀರ್ಷಿಕೆ 2205–00–103–0–01 (ಕಮಿಟೆಡ್ ನಾನ್‌ಪ್ಲಾನ್)

| | | |
|---|---|---|
| 1. ಉಪನಿರ್ದೇಶಕರು | – | 1 |
| 2. ಪುರಾತತ್ವ ಸಹಾಯಕರು | – | 2 |
| 3. ಅಟೆಂಡರ್ | – | 1 |
| | | 4 ಹುದ್ದೆಗಳು |

2. ಲೆಕ್ಕಶೀರ್ಷಿಕೆ 2205–00–107–0–01 (ಕಮಿಟೆಡ್ ನಾನ್‌ಪ್ಲಾನ್)

| | | |
|---|---|---|
| 1. ಕ್ಯುರೇಟರ್ | – | 3 ಹುದ್ದೆಗಳು |
| ಒಟ್ಟು ಕಮಿಟೆಡ್ ನಾನ್‌ಪ್ಲಾನ್ | | 7 ಹುದ್ದೆಗಳು |

3. ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) (ತಾತ್ಕಾಲಿಕ)

| | | |
|---|---|---|
| 1. ಸಹಾಯಕ ನಿರ್ದೇಶಕರು (ವಸ್ತುಸಂಗ್ರಹಾಲಯಗಳ ಅಭಿವೃದ್ಧಿ) | – | 1 |
| 2. ಪುರಾತತ್ವ ಸಹಾಯಕರು | – | 1 |

3. ಮಾನ್ಯುಮೆಂಟ್ ಅಟೆಂಡೆಂಟ್ಸ್ – 5

----------

7 ಹುದ್ದೆಗಳು

----------

4. ಲೆಕ್ಕಶೀರ್ಷಿಕೆ 2205–00–107–0–01 (ಯೋಜನೇತರ) (ತಾತ್ಕಾಲಿಕ)

| | | |
|---|---|---|
| 1. ಕ್ಯುರೇಟರ್ | – | 2 |
| 2. ದ್ವಿತೀಯ ದರ್ಜೆ ಸಹಾಯಕರು | – | 5 |
| 3. ಅಟೆಂಡರ್ | – | 1 |
| 4. ಗ್ರೂಪ್–ಡಿ | – | 8 |
| 5. ಪ್ಯೂನ್ | – | 2 |
| 6. ರಾತ್ರಿ ಕಾವಲುಗಾರ | – | 1 |
| | | 19 ಹುದ್ದೆಗಳು |
| ಒಟ್ಟು ಯೋಜನೇತರ (ತಾತ್ಕಾಲಿಕ) | | 26 ಹುದ್ದೆಗಳು |

**ಘೋಷ್ವಾರೆ**

| | | |
|---|---|---|
| 1) ಕಮಿಟೆಡ್ ಯೋಜನೇತರ ಹುದ್ದೆಗಳು | – | 7 |
| 2) ತಾತ್ಕಾಲಿಕ ಯೋಜನೇತರ ಹುದ್ದೆಗಳು | – | 26 |
| ಒಟ್ಟು ಹುದ್ದೆಗಳು | | 33 |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 801 ಐಎಫ್ಎಸ್ 2009 ದಿನಾಂಕ:30–6–2009ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆ ಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1878 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 74 ಸ್ವಿಮರ 2009, ದಿನಾಂಕ 18.05.2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 18.05.2009ರ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯವ್ಯಯ ಲೆಕ್ಕಶೀರ್ಷಿಕೆ "2205–00–800–0–09–059 (ಇತರೆ ಖರ್ಚು) ಯೋಜನೆ" ಯಡಿ ರೂ.100.00 ಲಕ್ಷಗಳ ಅನುದಾನ ಕಲ್ಪಿಸಿಕೊಳ್ಳಲಾಗಿದೆ. ಸದರಿ ಮೊತ್ತ ರೂ.100.00 ಲಕ್ಷಗಳಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದರ ವೆಚ್ಚಗಳನ್ನು ಭರಿಸಲು ದಿನಾಂಕ 01.04.2009ರಿಂದ 31.07.2009 ರ ಅವಧಿಗೆ ರೂ.33.00 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 84 ಕಸನಿ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರ ದಿನಾಂಕ 01.04.2009 ರಿಂದ 31.07.2009 ರವರೆಗಿನ ವೆಚ್ಚಗಳನ್ನು ಭರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಲೆಕ್ಕಶೀರ್ಷಿಕೆ 2205–00–800–0–09–059 (ಇತರೆ ಖರ್ಚು) (ಯೋಜನೆ) ಅಡಿಯಲ್ಲಿ ಒದಗಿಸಿರುವ ರೂ.100.00 ಲಕ್ಷಗಳಲ್ಲಿ ರೂ.33.00 ಲಕ್ಷಗಳನ್ನು (ರೂಪಾಯಿ ಮೂವತ್ತು ಮೂರು ಲಕ್ಷಗಳು ಮಾತ್ರ) ಆಡಳಿತ ಇಲಾಖೆಯಾದ ಸಿಆಸು ಇಲಾಖೆಗೆ ಬಿಡುಗಡೆ

ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ. ಈ ವೆಚ್ಚವನ್ನು ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 19 ಶಿಆಲೆ 2009, ದಿನಾಂಕ 15.04.2009 ರ ಸೂಚನೆಯ ಪ್ರಕಾರ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 1660 ಐಎಫ್(ಬಿಎ) 2009, ದಿನಾಂಕ 21.07.2009ರಲ್ಲಿ ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1894

**ವಿಷಯ:** ಗದಗ್‌ನಲ್ಲಿ ಚಟ್ಟಿ ಮರಿಗೆಪ್ಪ ಆರ್ಟ್‌ಗ್ಯಾಲರಿ ನಿರ್ಮಾಣಕ್ಕೆ ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ಪತ್ರ ಸಂಖ್ಯೆ: ಕಸನಿ/05/ಹೊಯೋ/2008–09 ದಿನಾಂಕ:5–6–2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ದಿನಾಂಕ:05–6–2009ರ ಪತ್ರದಲ್ಲಿ ಖ್ಯಾತ ಚಿತ್ರ ಕಲಾವಿದರಾದ ಶ್ರೀ ಚಟ್ಟಿ ಮರಿಗೆಪ್ಪ, ಇವರ ಆರ್ಟ್ ಗ್ಯಾಲರಿ ನಿರ್ಮಾಣ ಮಾಡಲು ರೂ.50.00ಲಕ್ಷಗಳ ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ. ಅವರು ಸಲ್ಲಿಸಿದ್ದು, ಸದರಿ ಯೋಜನೆ ಅನುಷ್ಠಾನ ಗೊಳಿಸಲು ರೂ.50.00ಲಕ್ಷಗಳನ್ನು 2009–10ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳು ಗದಗ್ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 83 ಕಸನಿ 2009 ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಖ್ಯಾತ ಚಿತ್ರ ಕಲಾವಿದರಾದ ಶ್ರೀ ಚಟ್ಟಿ ಮರಿಗೆಪ್ಪ ಇವರ ಆರ್ಟ್ ಗ್ಯಾಲರಿ ನಿರ್ಮಾಣ ಮಾಡಲು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ 1/4ರಷ್ಟು ಹಣ ಬಿಡುಗಡೆ ಮಾಡಲು ಅವಕಾಶವಿರುವುದರಿಂದ ರೂ.50.00ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ.12.50ಲಕ್ಷಗಳನ್ನು (ರೂಪಾಯಿ ಹನ್ನೆರಡು ಲಕ್ಷದ ಐವತ್ತು ಸಾವಿರಗಳು ಮಾತ್ರ) ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ನಿದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಇಲಾಖೆಯು ನಿಗಧಿತ ಅವಧಿಯೊಳಗೆ ಮುಕ್ತಾಯಗೊಳಿಸಲು ಕ್ರಮ ವಹಿಸತಕ್ಕದ್ದು.
2. ಈ ಸ್ಮಾರಕದ ಕಾಮಗಾರಿಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಸ್ತುವಾರಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರ ಅಡಿ ಟೆಂಡರ್ ಪ್ರಕ್ರಿಯೆ ಪೂರೈಸಿ ತೆಗೆದುಕೊಳ್ಳತಕ್ಕದ್ದು ಹಾಗೂ ನಂತರದ ನಿರ್ವಹಣೆ ಇಲಾಖೆಯೇ ನೋಡಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರ ಟಿಪ್ಪಣಿ ಸಂ: ಶಿಇ 1562 ಐಎಫ್ (ಬಿ&ಎ) 2009 ದಿನಾಂಕ:9.7.09 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1897

**ವಿಷಯ:** ಗದಗ್ ಜಿಲ್ಲೆಯ ಹೊಳೆ ಆಲೂರಿನಲ್ಲಿ ಅಲೂರು ವೆಂಕಟರಾವ್ ಅವರ ಸ್ಮಾರಕಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂ:ಕಸನಿ:ಸ್ಮಾರಕ:8: 2007–08, ದಿ:22.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ದಿನಾಂಕ: 22.06.2009ರ ಪತ್ರದಲ್ಲಿ 2007–08ನೇ ಸಾಲಿನ ಆಯವ್ಯಯದಲ್ಲಿ ಗದಗ್ ಜಿಲ್ಲೆಯ ಹೊಳೆ ಆಲೂರಿನಲ್ಲಿ ಆಲೂರು ವೆಂಕಟರಾವ್ ರವರ ಸ್ಮಾರಕಕ್ಕೆ ರೂ.25.00ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಗದಗ್ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿದೆ. 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಯೋಜನೆಗೆ ಮಾನ್ಯ ಮುಖ್ಯಮಂತ್ರಿಗಳು ರೂ.100.00ಲಕ್ಷಗಳನ್ನು ಬಿಡುಗಡೆ ಮಾಡಲು ಘೋಷಿಸಿದ್ದು, ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ, ಇವರು ಈ ಕೆಳಕಂಡ ಅಂದಾಜು ವೆಚ್ಚ ಪಟ್ಟಿಯನ್ನು ಸಲ್ಲಿಸಿರುವುದಾಗಿ ವರದಿ ಮಾಡಿರುತ್ತಾರೆ.

| ಕ್ರ.ಸಂ. | ವಿವರ | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಆಲೂರು ವೆಂಕಟರಾವ್ ಅವರ ಸ್ಮಾರಕ ಭವನ ನಿರ್ಮಾಣ | ರೂ.93.00ಲಕ್ಷ |
| 2 | ಆಲೂರು ವೆಂಕಟರಾವ್ ಅವರ ಪ್ರತಿಮೆ ಹಾಗೂ ಉದ್ಯಾನ ನಿರ್ಮಾಣ | ರೂ.25.00ಲಕ್ಷ |
| 3 | ನಿವೇಶನ ಖರೀದಿಗಾಗಿ | ರೂ.10.00ಲಕ್ಷ |
| **ಒಟ್ಟು** | | **ರೂ.128.00ಲಕ್ಷ** |

ಇದನ್ನು ಪರಿಶೀಲಿಸಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರು ಈಗಾಗಲೇ ಈ ಯೋಜನೆಗೆ ಪ್ರಸಕ್ತ ಸಾಲಿನಲ್ಲಿ ರೂ.100ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 4202–04–800–1–08–132(ಯೋಜನೆ) ಕ್ರಿಯಾ ಯೋಜನೆ ಸಂಖ್ಯೆ:39 ಗಡಿ ಭಾಗಗಳಲ್ಲಿ ಸುವರ್ಣ ಸೌಧ ನಿರ್ಮಾಣದಡಿ ಭರಿಸಬಹುದೆಂದು ತಿಳಿಸುತ್ತಾ ಸದರಿ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 24 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಗದಗ್ ಜಿಲ್ಲೆ ಹೊಳೆ ಆಲೂರಿನಲ್ಲಿ ಆಲೂರು ವೆಂಕಟರಾವ್ ಅವರ ಸ್ಮಾರಕ ನಿರ್ಮಿಸಲು ರೂ.100.00ಲಕ್ಷಗಳು (ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ)ಗಳನ್ನು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ, ಗದಗ್, ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಿದೆ.

1. ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಇಲಾಖೆಯು ನಿಗಧಿತ ಅವಧಿಯೊಳಗೆ ಮುಕ್ತಾಯಗೊಳಿಸಲು ಕ್ರಮ ವಹಿಸತಕ್ಕದ್ದು.
2. ಈ ಮೊತ್ತವು ಸದರಿ ಯೋಜನೆಗೆ ಒಂದು ಸಮಯದ ಅನುದಾನವಾಗಿರುತ್ತದೆ.
3. ಈ ಸ್ಮಾರಕದ ಕಾಮಗಾರಿಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಸ್ತುವಾರಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರ ಅಡಿ ಟೆಂಡರ್ ಪ್ರಕ್ರಿಯೆ ಪೂರೈಸಿ ತೆಗೆದುಕೊಳ್ಳಬೇಕೆಂದು ಹಾಗೂ ನಂತರದ ನಿರ್ವಹಣೆ ಇಲಾಖೆಯೇ ನೋಡಿಕೊಳ್ಳತಕ್ಕದ್ದು.

ಈ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–31–059 ಇತರೆ ಖರ್ಚು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 577 ವೆಚ್ಚ–7 2009, ದಿನಾಂಕ:08–07–09 ಹಾಗೂ ಯೋಜನಾ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಪಿಡಿ 45 ಎಂಇ 2009, ದಿನಾಂಕ:29–05–09ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1898 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ತುಮಕೂರು ಜಿಲ್ಲಾ ಗ್ಯಾಸೆಟಿಯರ್‌ನ ಸಂಪಾದನೆ ಹಾಗೂ ಪ್ರಕಟಣೆಗೆ ಆಡಳಿತಾತ್ಮಕ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಗ್ಯಾಇ: ತುಜಿಗ್ಯಾ:2009–10 ದಿನಾಂಕ 21.05.2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 21.05.2009 ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ರವರು ತುಮಕೂರು ಜಿಲ್ಲಾ ಗ್ಯಾಸೆಟಿಯರ್‌ನ ಸಂಪಾದನೆ ಹಾಗೂ ಪ್ರಕಟಣೆಗೆ ಉದ್ದೇಶಿಸಿದ್ದು, ಇದಕ್ಕೆ ತಗಲುವ ರೂ 4.00 ಲಕ್ಷಗಳನ್ನು 2009–10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಭರಿಸಲು ಅವಕಾಶ ಕಲ್ಪಿಸಿಕೊಂಡಿದ್ದು, ಮೇಲ್ಕಂಡ ಸಂಪಾದನೆ ಹಾಗೂ ಪ್ರಕಟಣೆಗೆ ಆಡಳಿತಾತ್ಮಕ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 7 ಕರಾಗೆ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲಾ ಗ್ಯಾಸೆಟಿಯರ್‌ನ ಸಂಪಾದನೆ ಹಾಗೂ ಪ್ರಕಟಣೆಗೆ ತಗಲುವ ರೂ.4.00 ಲಕ್ಷಗಳನ್ನು (ರೂಪಾಯಿ ನಾಲ್ಕು ಲಕ್ಷಗಳು ಮಾತ್ರ)ಗಳನ್ನು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರಿಗೆ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

1) ಈ ಯೋಜನೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು
2) ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
3) ಹಣ ಬಳಕೆ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 3454–02–110–0–01–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಟಿಪ್ಪಣಿ ಸಂಖ್ಯೆ:ಶಿಇ 1709 ಐಎಫ್ (ಬಿ&ಎ) 2009 ದಿನಾಂಕ 28.07.2009ರಲ್ಲಿ ಸಹಮತಿ ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2006 ದಿನಾಂಕ 10.07.2006ರಲ್ಲಿ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1899 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ಬಸವರಾಜ ಕುರಿಯವರ್, ಮಾನ್ಯ ಅಧ್ಯಕ್ಷರ ವಾಹನ ಚಾಲಕರು ಇವರನ್ನು ಹೊರ ಗುತ್ತಿಗೆ ಆಧಾರದ ಮೇಲೆ ವಾಹನ ಚಾಲಕರಾಗಿ ನೇಮಿಸಿರುವುದನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ ಕಪ್ರಾ/ಕಾ/34/2008–09 ದಿನಾಂಕ:05.06.2009

**ಪ್ರಸ್ತಾವನೆ:**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಕಛೇರಿಯ ಸಿಬ್ಬಂದಿ ವಿಭಾಗದಲ್ಲಿ ಕನ್ನಡ ಅನುಷ್ಠಾನದ ಸಲುವಾಗಿ ಅನಿರೀಕ್ಷಿತ ಭೇಟಿ ನೀಡುವ ಹಿನ್ನೆಲೆಯಲ್ಲಿ ಅಂಬಾಸಿಡರ್ ಕಾರು ಕೆಎ–01–ಜಿ–4373ನ್ನು ಉಪಯೋಗಿಸುವುದಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 10 ಕೆಪಿಎಲ್ 2009 ದಿನಾಂಕ 19.06.2009ರ ಆದೇಶದಲ್ಲಿ ಸದರಿ ವಾಹನಕ್ಕೆ ವಾಹನ ಚಾಲಕರ ಹುದ್ದೆಯನ್ನು ಹೊರ ಗುತ್ತಿಗೆ ಆಧಾರದ ಮೇಲೆ ನೇಮಿಸಕೊಳ್ಳಲು ಅನುಮತಿ ನೀಡಲಾಗಿದೆ. ಅದರನ್ವಯ ಅಧ್ಯಕ್ಷರ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ ಕಪ್ರಾ/6/62/2009–10 ದಿನಾಂಕ 25.05.2009ರಲ್ಲಿ ಶ್ರೀ ಬಸವರಾಜ ಕುರಿಯವರ್, ಬೆಂಗಳೂರು ಅವರನ್ನು ಹೊರ ಗುತ್ತಿಗೆ ಆಧಾರದ ಮೇಲೆ ವಾಹನ ಚಾಲಕರಾಗಿ ದಿನಾಂಕ 23.05.2009 ರಿಂದ ಜಾರಿಗೆ ಬರುವಂತೆ ನೇಮಕ ಮಾಡಿ ಆದೇಶ ನೀಡಬೇಕೆಂದು ಕೋರಿರುತ್ತಾರೆ. ಅದರನ್ವಯ ಮೇಲೆ ಓದಲಾದ ದಿನಾಂಕ 05.06.2009ರ ಪತ್ರದಲ್ಲಿ ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಶ್ರೀ ಬಸವರಾಜ ಕುರಿಯವರ್ ರವರನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿರುವುದನ್ನು ಅನುಮೋದಿಸಿ, ಸಂಚಿತ ವೇತನ ರೂ.,5800.00 ಗಳನ್ನು ನಿಗಧಿಪಡಿಸಿ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 39 ಕೆಒಎಲ್ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಸವರಾಜ ಕುರಿಯವರ್, ನಂ.93, 3ನೇ ಮುಖ್ಯರಸ್ತೆ, 4ನೇ ಹಂತ, ಡಾಲರ್ಸ್ ಕಾಲೋನಿ, ಜೆ.ಪಿ. ನಗರ, 3ನೇ ಹಂತ , ಬೆಂಗಳೂರು–78 ಇವರನ್ನು ಹೊರ ಗುತ್ತಿಗೆ ಆಧಾರದ ಮೇಲೆ ದಿನಾಂಕ 23.05.2009 ರಿಂದ ಜಾರಿಗೆ ಬರುವಂತೆ ಹಾಗೂ ಅಧ್ಯಕ್ಷರು ಕನ್ನಡ ಅಭಿವೃದ್ಧಿ ಪ್ರಾಧೀಕಾರ ಅವರ ಪದಾವಧಿ ಇರುವವರೆಗೆ ಅಥವಾ ಈ ಬಗ್ಗೆ ಮುಂದಿನ ಆದೇಶದವರೆಗೆ ನೆಮಿಸಲು ಸರ್ಕಾರದ ಅನುಮತಿ ನಿಡಲಾಗಿದೆ. ಈ ನೇಮಕಾತಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮ 1999 ಅದರ ನಿಯಮಗಳು 2000ರ ಉಪಬಂಧಗಳನ್ವಯ ಏಜೆನ್ಸಿಯ ಮೂಲಕ ಪಡೆಯಲು ಕ್ರಮ ವಹಿಸಲು ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 649 ವೆಚ್ಚ–7/09 ದಿನಾಂಕ 21.07.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1900 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿ ಅನುಷ್ಠಾನಕ್ಕಾಗಿ 2009–10ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು

**ಓದಲಾಗಿದೆ:** 1. ಆಯುಕ್ತರು ಕಬ್ಬು ಅಭಿವೃದ್ದಿ ಮತ್ತು ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿಎಸ್‌ಕೆ/ರಕರ/ಅನುದಾನ/ 3/2009–10 ದಿನಾಂಕ: 19–06–2009.

2. ಸರ್ಕಾರದ ಆದೇಶ ಸಂಖ್ಯೆ: ವಾಕೈ 88 ಆಂಅಸ (1) 2009 ದಿನಾಂಕ 22.4.2009.

**ಪ್ರಸ್ತಾವನೆ:**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆ ಕಾಮಗಾರಿಗಳ ಅನುಷ್ಠಾನಕ್ಕಾಗಿ 2009–10ನೇ ಸಾಲಿನಲ್ಲಿ ಒದಗಿಸಲಾಗಿರುವ ರೂ.165/– ಲಕ್ಷಗಳನ್ನು ಆದ್ಯತೆ ಮೇರೆಗೆ ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ 19.06.2009ರ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಕಾರ್ಖಾನೆಯ ಹೆಸರು | ವರ್ಷ | ಮೊತ್ತ | ಕಿ.ಮೀ. |
|---|---|---|---|---|
| 1 | ಹಿರಣ್ಯಕೇಶಿ ಸ.ಸ.ಕಾ, ಸಂಕೇಶ್ವರ | 1999–2000 | 43.40 | 15.00 |
| 2 | ಶ್ಯಾಮನೂರು ಶುಗರ್ಸ್, ದುಗ್ಗಾವತಿ | 2000–2001 | 0.21 | –– |
| 3 | ಶ್ರೀ ರೇಣುಕಾ ಶುಗರ್ಸ್, ಮನೋಳಿ | 2000–2001 | 62.40 | 32.00 |
| 4 | ದಾವಣಗೆರೆ ಶುಗರ್ಸ್, ಕುಕ್ಕವಾಡ | 2000–2001 | 7.13 | 4.00 |
| 5 | ಬೀದರ್ ಸ.ಸ.ಕಾ, ಹಳ್ಳಿಖೇಡ್ (ಒಟ್ಟು ಮೊತ್ತ ರೂ. 93.92ರಲ್ಲಿ ರೂ. 51.86ನ್ನು ಭಾಗಶ: ಬಿಡುಗಡೆಗೆ ಕೋರಿದ್ದಾರೆ) | 2000–2001 | 51.86 | 10.00 |
| | **ಒಟ್ಟು** | | **165.00** | **61.00** |

ಮೇಲೆ ಓದಲಾದ (2)ರ ಆದೇಶದಲ್ಲಿ 2009–10ನೇ ಸಾಲಿನ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಮಂಜೂರಾತಿ ನೀಡುವ ಸಂಬಂಧ ಹೊರಡಿಸಿರುವ ಆದೇಶದಲ್ಲಿ ಇಲಾಖೆಯ ಲೆಕ್ಕ ಶೀರ್ಷಿಕೆ 4860–04–800–0–01 ರಸ್ತೆಗಳು 172 (ಯೋಜನೆ) ಅಡಿಯಲ್ಲಿ 165.00 ಲಕ್ಷ ರೂ.ಗಳನ್ನು ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಒದಗಿಸಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ದಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 147 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–800–0–01–ರಸ್ತೆಗಳು 172 (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ

ರೂ. 165.00 ಲಕ್ಷ ಗಳಲ್ಲಿ ಮೊದಲನೆ ತ್ರೈಮಾಸಿಕಕ್ಕೆ ಶೇ.25 ಭಾಗ ಅಂದರೆ ರೂ. 41.25 ಲಕ್ಷಗಳನ್ನು (ನಲವತ್ತೊಂದು ಲಕ್ಷ ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗಾಗಿ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಟಿಪ್ಪಣಿ ಸಂಖ್ಯೆ ವಾಕೈ 181 ಆಂಆಸ(1) 2009 ದಿನಾಂಕ:16–07–2009ರಲ್ಲಿ ನೀಡಲಾದ ಸಹಮತಿಯಂತೆ ಹಾಗೂ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1842 **ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ(ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನ:ಶ್ಚೇತನಕ್ಕೆ ಸರ್ಕಾರದಿಂದ ಆರ್ಥಿಕ ನೆರವು–2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಹಣದ ಬಿಡುಗಡೆ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಕೋ/09/ ಎಂಡಿ/588 ದಿನಾಂಕ 06.05.09 ಮತ್ತು 17.06.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರಗಳಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವ ಸಲುವಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ 50.00 ಕೋಟಿ ರೂ.ಗಳನ್ನು ಕಾರ್ಖಾನೆಯು ತೆಗೆದುಕೊಳ್ಳಲಿರುವ ಈ ಕೆಳಕಂಡ ಕಾರ್ಯಕ್ರಮಗಳಿಗಾಗಿ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| | |
|---|---|
| 1) ಮಿಲ್ಲಿನ ಆಧುನೀಕರಣಕ್ಕಾಗಿ | 1950–00 ಲಕ್ಷ ರೂ.ಗಳು |
| 2) ಬಾಯ್ಲಿಂಗ್ ಹೌಸ್ ನವೀಕರಣ | 980–00 ಲಕ್ಷ ರೂ.ಗಳು |
| 3) ಸಹ ವಿದ್ಯುತ್ ಘಟಕಕ್ಕೆ | 1450–00 ಲಕ್ಷ ರೂ.ಗಳು |
| 4) ದುಡಿಯುವ ಬಂಡವಾಳ | 620–00 ಲಕ್ಷ ರೂ.ಗಳು |
| **ಒಟ್ಟು** | **5000–00 ಲಕ್ಷ ರೂ.ಗಳು** |

ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ 2009–10ನೇ ಸಾಲಿನ ಅನುದಾನದಲ್ಲಿ ಒದಗಿಸಲಾಗಿರುವ 50.00 ಕೋಟಿ ರೂಗಳಲ್ಲಿ ಕಾರ್ಖಾನೆಯ ಪುನ:ಶ್ಚೇತನ ಸಂಬಂಧ 10.00 ಕೋಟಿ ರೂ.ಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಮೊದಲನೆಯ ಕಂತಾಗಿ ಕಾರ್ಖಾನೆಗೆ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 70 ಎಸ್‌ಜಿಎಫ್ 2009, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2009–10ನೇ ಸಾಲಿಗೆ ಕಾರ್ಖಾನೆಯ ಪುನ:ಶ್ಚೇತನ ಸಂಬಂಧ ಸಹ–ವಿದ್ಯುತ್ ಘಟಕ ಹಾಗೂ ಅತ್ಯಾವಶ್ಯಕ ಆಧುನೀಕರಣ ಕಾರ್ಯಕ್ರಮಗಳಿಗೆ, ಬಂಡವಾಳ ಹೂಡಿಕೆಗಾಗಿ 10.00 ಕೋಟಿ ರೂಗಳನ್ನು (ಹತ್ತು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2009–10ನೇ ಸಾಲಿನ ಅನುದಾನದಲ್ಲಿ ಕಾರ್ಖಾನೆಯ ಪುನ:ಶ್ಚೇತನ ಸಂಬಂಧ ಲೆಕ್ಕ ಶೀರ್ಷಿಕೆ "4852–02–190–0–04 (ಯೋಜನೆ) 211 – ಹೂಡಿಕೆ" ಅಡಿಯಲ್ಲಿ ಒದಗಿಸಲಾಗಿರುವ 50.00 ಕೋಟಿ ರೂ.ಗಳಲ್ಲಿ ಮೊದಲನೆಯ ಕಂತು 10.00 ಕೋಟಿ ರೂ.ಗಳನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1070 ವೆಚ್ಚ–1/2009 ದಿನಾಂಕ 20.07.09ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1843 **ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು 2006–07ನೇ ಸಾಲಿಗೆ.

**ಓದಲಾಗಿದೆ:**
1) ದಿನಾಂಕ 12.04.2007ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.06.07.
3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.09.07
4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2) ದಿನಾಂಕ: 19.10.07
5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3) ದಿನಾಂಕ: 02.11.2007.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–02 (4)) ದಿನಾಂಕ: 01.01.08.
7) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (6) ದಿನಾಂಕ: 22.02.08.
8) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ: 12.03.2008
9) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (7) ದಿನಾಂಕ: 20.03.08
10) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (8) ದಿನಾಂಕ: 25.03.08
11) ಸರ್ಕಾರದ ಆದೇಶ ಸಂ: ಸಿಐ 58 ಎಸ್‌ಜಿಎಫ್ 07(ಭಾ–2)(9) ದಿನಾಂಕ 21.05.2008
12) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ 13.06.2008.
13) ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 2007,(ಭಾ–2)(10) ದಿನಾಂಕ:30–06–2008.
14) ಸರ್ಕಾರದ ಆದೇಶ ಸಂಖ್ಯೆ:ಸಿಐ 58 ಎಸ್‌ಜಿಎಫ್ 2007,(ಭಾ–2)(11) ದಿನಾಂಕ 24.11.2008.
15) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2)(12) ದಿನಾಂಕ 02.07.2009
16) ಆಯುಕ್ತರು ಕಬ್ಬು ಅಭಿವೃದ್ದಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/36/ಬಿಜಾಪುರ/2008–09 ದಿನಾಂಕ: 10.11.2008, 25.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ 2006–07ನೇ ಸಾಲಿನ ಸಕ್ಕರೆ ವರ್ಷಕ್ಕೆ ಸಂಬಂಧಿಸಿದಂತೆ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18.916/– ರೈತರಿಗೆ ಪರಿಹಾರ ಧನ ರೂ. 25,00,00,000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92,000/– ರೂಗಳು ಸೇರಿ ಒಟ್ಟು 49,76,10,916/–ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (9) (10) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ 7.00 ಕೋಟಿ ರೂಗಳು, 6.64 ಕೋಟಿ ರೂಗಳು ಮತ್ತು 1,25,11,000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ: 01.06.07 ರಿಂದ 31.07.07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ 8.75 ಕೋಟಿ ರೂಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ.100/–ನಂತೆ 8,74,92,000/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11)ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16.04.2007 ರಿಂದ 31.05.2007ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ.100/–ರಂತೆ ರೂ.10,00,00,000/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು 3.00 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14) ರಲ್ಲಿರುವ ಆದೇಶದಲ್ಲಿ ರೈತರಿಗೆ ಪರಿಹಾರ ಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ. 3,03,73,203/– ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (15) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಪ್ರತಿ ಟನ್‌ಗೆ ರೂ.2/–ರಂತೆ ಸಾಗಾಣಿಕೆ ಸಹಾಯಧನ 1,81,07,599–00 ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (16) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರಗಳಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ಮತ್ತು ಸಿಂಧಗಿ ತಾಲ್ಲೂಕುಗಳಲ್ಲಿ 12 ತಿಂಗಳು ಪೂರೈಸಿ ಕಟಾವಾಗದೆ ಜಮೀನಿನಲ್ಲಿ ಉಳಿದಂತಹ

ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರಿಗೆ 25,000/– ರೂ.ಗಳಂತೆ ಪರಿಹಾರಧನ ಇಂಡಿ ತಾಲ್ಲೂಕಿನ 5,776 ಅರ್ಹ ರೈತರಿಗೆ 17,27,68,000/– ರೂ.ಗಳನ್ನು ಮತ್ತು ಸಿಂಧಗಿ ತಾಲ್ಲೂಕಿನ 3595 ಅರ್ಹ ರೈತರಿಗೆ 11,77,10,500/– ರೂ.ಗಳನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (13), ಬೆಂಗಳೂರು ದಿನಾಂಕ: 11ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ 12 ತಿಂಗಳು ಪೂರೈಸಿ ಕಟಾವಾಗದೆ ಜಮೀನಿನಲ್ಲಿ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/– ಗಳಂತೆ ಪರಿಹಾರಧನವನ್ನು ರಾಜ್ಯದ ಬಿಜಾಪುರ ಜಿಲ್ಲೆಯ ಇಂಡಿ ಮತ್ತು ಸಿಂಧಗಿ ತಾಲ್ಲೂಕುಗಳ ಕಬ್ಬು ಬೆಳೆದ ರೈತರಿಗೆ ಪಾವತಿಸುವ ಸಲುವಾಗಿ 15,00,00,000/– ರೂ.ಗಳನ್ನು (ಹದಿನೈದು ಕೋಟಿ ರೂ.ಗಳು ಮಾತ್ರ) ಬಿಜಾಪುರ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ)" ಸಹಾಯಧನ ಅಡಿಯಲ್ಲಿ 34.50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 15,00,00,000/– ರೂ.ಗಳನ್ನು ರೈತರಿಗೆ ಪರಿಹಾರಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ: 13–06–2007 ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳಯನ್ವಯ ಪರಿಶೀಲಿಸಿ, ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1218 ವೆಚ್ಚ–1/2009 ದಿನಾಂಕ: 07.08.09 ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1933 **ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕೋಲಾರ ಜಿಲ್ಲೆಯ ಮುಳಬಾಗಿಲು ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಉಪಯೋಗಕ್ಕಾಗಿ ಸರ್ಕಾರಿ ಕಟ್ಟಡ ನಿರ್ಮಿಸಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ರೇಬೀರೇಕ್ಷೇ/ಮುಬಾ/ ಕಟ್ಟಡ/ 22/08–09, ದಿನಾಂಕ: 10–2–2009, 3–3–2009, 5–5–2009 ಮತ್ತು 25–6–2009.

**ಪ್ರಸ್ತಾವನೆ:**

ಕೋಲಾರ ಜಿಲ್ಲೆಯಲ್ಲಿ ಮುಳಬಾಗಿಲು ಬಿತ್ತನೆಕೋಠಿಯು ಸೇರಿದಂತೆ 7 ಸರ್ಕಾರಿ ಬಿತ್ತನೆಕೋಠಿಗಳು ಕಾರ್ಯನಿರ್ವಹಿಸುತ್ತಿದ್ದು, ಮುಳಬಾಗಿಲು ಬಿತ್ತನೆಕೋಠಿಯಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ರೇಷ್ಮೆ ಮೊಟ್ಟೆಗಳನ್ನು ಉತ್ಪಾದಿಸಲಾಗುತ್ತಿದೆ. ಸದರಿ ಬಿತ್ತನೆಕೋಠಿಯು ಖಾಸಗಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಟ್ಟಡದ ಮೇಲ್ಛಾವಣಿಯು ಕಲ್ನಾರಿನದಾಗಿದ್ದು, ಕಟ್ಟಡವು ಸಹ ಹಳೆಯದಾಗಿರುವುದರಿಂದ ಹಾಗೂ ಮುಳಬಾಗಿಲು ಪಟ್ಟಣದಲ್ಲಿ ಬೇಡಿಕೆ ಪ್ರಕಾರ ಇನ್ನೂ ಹೆಚ್ಚಿನ ಪ್ರಮಾಣದ ಮಿಶ್ರತಳಿ ಮೊಟ್ಟೆಗಳನ್ನು ತಯಾರಿಸಲು ಯಾವುದೇ ಖಾಸಗಿ ಕಟ್ಟಡಗಳು ಬಾಡಿಗೆಗೆ ಲಭ್ಯವಿರುವುದಿಲ್ಲವಾದ್ದರಿಂದ ಇಲಾಖಾ ವತಿಯಿಂದ ಸರ್ಕಾರಿ ಬಿತ್ತನೆಕೋಠಿ ಕಟ್ಟಡ ನಿರ್ಮಿಸಲು ಪರಿಶೀಲಿಸಿದ್ದು, ಮುಳಬಾಗಿಲು ಪಟ್ಟಣದ ರಾಷ್ಟ್ರೀಯ ಹೆದ್ದಾರಿ 4 ಕ್ಕೆ ಹೊಂದಿಕೊಂಡಂತಿರುವ ವಿಠಲಪುರ ಬಡಾವಣೆಯ ಸರ್ವೆ ನಂ. 45 ರಲ್ಲಿ 13 ಗುಂಟೆ ವಿಸ್ತೀರ್ಣದ ಜಮೀನಿನಲ್ಲಿ ಸರ್ಕಾರಿ ಬಿತ್ತನೆಕೋಠಿ ಕಟ್ಟಡವನ್ನು ನಿರ್ಮಿಸಲು ಪ್ರಸ್ತಾವಿಸಿ, ಸದರಿ ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರಗಳಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿದ್ದರು. ನಂತರ ಮುಳಬಾಗಿಲು ಪಟ್ಟಣದ ಸರ್ವೆ ನಂ. 45ರ ಬದಲಾಗಿ ಮುಳಬಾಗಿಲು ಪಟ್ಟಣದ ದೇವರಾಯಸಮುದ್ರ (ರಾಷ್ಟ್ರೀಯ ಹೆದ್ದಾರಿ–4) ರಲ್ಲಿರುವ ರೇಷ್ಮೆ ಕೃಷಿ ಕ್ಷೇತ್ರದಲ್ಲಿ ರೇಷ್ಮೆ ಬಿತ್ತನೆಕೋಠಿ ಕಟ್ಟಡ ನಿರ್ಮಿಸಲು ಪ್ರಸ್ತಾವಿಸಿ, ಅದರಲ್ಲಿರುವ 6.20 ಎಕರೆ ಜಮೀನಿನಲ್ಲಿ ಬಿತ್ತನೆಕೋಠಿ ಕಟ್ಟಡ ನಿರ್ಮಿಸಲು ರೂ. 44.00 ಲಕ್ಷಗಳ ಅಂದಾಜು ಪಟ್ಟಿಯನ್ನು ತಯಾರಿಸಿ ಕಳುಹಿಸಿ, ದೇವರಾಯನಸಮುದ್ರ ರೇಷ್ಮೆ ಕೃಷಿ ಕ್ಷೇತ್ರದಲ್ಲಿ ಬಿತ್ತನೆಕೋಠಿ ಕಟ್ಟಡ ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ದಿನಾಂಕ: 3–3–2009ರ ಪತ್ರದಲ್ಲಿ ಕೋರಿರುತ್ತಾರೆ.

2009–10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4851–00–107–1–01–ಯೋಜನೆ ಯಡಿಯಲ್ಲಿನ ವಂಟನೆಯಿಂದ ಈ ಕಾಮಗಾರಿಯನ್ನು ಕೈಗೊಳ್ಳುವುದಾಗಿ ತಿಳಿಸಿ, ಲೋಕೋಪಯೋಗಿ ಇಲಾಖೆಯು ನಿರ್ದಿಷ್ಟಪಡಿಸಿದ ಮಾನದಂಡದನ್ವಯ ನಕ್ಷೆ ಹಾಗೂ ಅಂದಾಜುಪಟ್ಟಿಯನ್ನು ತಯಾರಿಸಿ ಕಳುಹಿಸಿರುವುದಾಗಿ ತಿಳಿಸಿ, ಬಿತ್ತನೆಕೋಠಿ ಕಟ್ಟಡ ನಿರ್ಮಾಣಕ್ಕೆ ಅನುಕೂಲವಾಗುವಂತೆ ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರವಾಗಿ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ:5–5–2009 ಹಾಗೂ 25–6–2009ರ ಪತ್ರಗಳಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಅವರು ಕೋರಿರುವಂತೆ ದೇವರಾಯಸಮುದ್ರ ರೇಷ್ಮೆ ಕೃಷಿ ಕ್ಷೇತ್ರದ ಜಮೀನಿನಲ್ಲಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡ, ನಿರ್ಮಾಣಕ್ಕೆ ಅನುಮೋದನೆ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 12 ರೇಯೋವಿ 2009, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಮುಳಬಾಗಿಲು ಪಟ್ಟಣದ ದೇವರಾಯಸಮುದ್ರದ ರೇಷ್ಮೆ ಕೃಷಿ ಕ್ಷೇತ್ರದಲ್ಲಿ ರೇಷ್ಮೆ ಬಿತ್ತನೆಕೋಠಿ ಕಟ್ಟಡದ ನಿರ್ಮಾಣದ ರೂ. 44.00 ಲಕ್ಷಗಳ ಕಾಮಗಾರಿಯ ಅಂದಾಜು ಪಟ್ಟಿಯಂತೆ ಕಟ್ಟಡ ನಿರ್ಮಾಣ ಮಾಡುವುದಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯ ವೆಚ್ಚವನ್ನು 2009–10ನೇ ಸಾಲಿನಲ್ಲಿ ಕಾಮಗಾರಿ ಉದ್ದೇಶಕ್ಕಾಗಿ ಲೆಕ್ಕಶೀರ್ಷಿಕೆ 4851–00–107–1–01–ಯೋಜನೆಯಡಿಯಲ್ಲಿ ಒದಗಿಸಿರುವ ವಂಟನೆಯಲ್ಲಿ ಭರಿಸತಕ್ಕದ್ದು.

ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1934

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಕಲಮೂಡ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 10/06/2009ರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ ಬಿಜಾ/ಭೂಸ್ವಾಪ್ರ/2009–10/3390.

**ಪ್ರಸ್ತಾವನೆ:–**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ಕಲಮೂಡ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸ್ವಂತ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 1,81,705/–ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 31/10/1996,

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 15/12/1998,

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀಪು ನೀಡಿದೆ. ಈ ತೀರ್ಪಿನ ವಿರುದ್ಧ ಸರ್ಕಾರದ ಪರವಾಗಿ ಜಿಲ್ಲಾ ನ್ಯಾಯಾಲಯ ಗುಲ್ಬರ್ಗಾ ಇಲ್ಲಿ ಮೇಲ್ಮನವಿ (ಎಲ್.ಎ.ಸಿ.ಎ) ಗಳನ್ನು ದಾಖಲಿಸಿದ್ದು, ಜಿಲ್ಲಾ ನ್ಯಾಯಾಲಯವು ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ತೀರ್ಪು ನೀಡಿರುತ್ತದೆ.

ಜಿಲ್ಲಾ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಪತ್ರ ಸಂಖ್ಯೆ: ಆರ್‌ಡಿ 97 ಎಲ್‌ಸಿಜಿ 2009 ದಿನಾಂಕ: 05/01/2009ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಪ್ರಕರಣ ಸಂಖ್ಯೆ | ಎಲ್.ಎ.ಸಿ.ಎ ಸಂಖ್ಯೆ | ಸ್ವಂತ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 01 | 51/2000 | 340/2004 | 211/1–2 | 0–20 | 100913 |
| 02 | 55/2000 | 341/2004 | 208/1–5 | 0–16 | 80792 |
| **ಒಟ್ಟು** | | | | | **181705** |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 94 ಭೂಸ್ವಾಪ್ರ 2009 ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ಕಲಮೂಡ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸ್ವಂತ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ. 1,81,705/–ಗಳನ್ನು (ಒಂದು ಲಕ್ಷದ ಎಂಭತ್ತೊಂದು ಸಾವಿರದ ಏಳು ನೂರ ಐದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಡೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1830

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಸರ್ಕಾರದ ಆದೇಶ ಸಂಖ್ಯೆ: ಸನೀಇ 118 ಸೇಸಎ 2008 ಬೆಂಗಳೂರು ದಿನಾಂಕ: 14ನೇ ಜುಲೈ 2009**

**ವಿಷಯ:** ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕಚೇರಿಯನ್ನು ಹಳಿಯಾಳದಿಂದ ಶಿರಸಿಗೆ ಸ್ಥಳಾಂತರಿಸುವ ಬಗ್ಗೆ– ಆದೇಶ.

**ಓದಲಾಗಿದೆ:** 1. ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾಪುರ/ಸಿಬ್ಬಂದಿ–6/2009–10/3989 ದಿನಾಂಕ:09.07.2009.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ:09.07.2009ರ ಪತ್ರದಲ್ಲಿ ಸಣ್ಣ ನೀರಾವರಿ ವಿಭಾಗ, ಹಳಿಯಾಳ ಇಲ್ಲಿನ ಕಾರ್ಯಪಾಲಕ ಇಂಜಿನಿಯರ್‌ರವರ ಕಚೇರಿಯ ಕಾರ್ಯವ್ಯಾಪ್ತಿಯಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಒಟ್ಟು 11 ತಾಲ್ಲೂಕುಗಳು ಒಳಗೊಂಡಿದ್ದು, ಘಟ್ಟದ ಮೇಲಿನ ತಾಲ್ಲೂಕುಗಳಾದ ಹಳಿಯಾಳ, ಮುಂಡಗೋಡ, ಶಿರಸಿ, ಸಿದ್ದಾಪುರ, ಯಲ್ಲಾಪುರ, ಜೋಯಿಡಾ ಕ್ಷೇತ್ರಗಳಲ್ಲಿ ಹೆಚ್ಚಿನ ಸಂಖ್ಯೆಯ ಕಾಮಗಾರಿಗಳು ಮತ್ತು ನೀರಾವರಿ ಕ್ಷೇತ್ರಗಳಿದ್ದು, ಕರಾವಳಿ ಪ್ರದೇಶದಲ್ಲಿನ ತಾಲ್ಲೂಕುಗಳಾದ ಕಾರವಾರ, ಅಂಕೋಲಾ, ಕುಮುಟಾ, ಹೊನ್ನಾವರ ಮತ್ತು ಭಟ್ಕಳ ಕ್ಷೇತ್ರಗಳಲ್ಲಿ ಕಡಿಮೆ ಕಾಮಗಾರಿಗಳು ಹಾಗೂ ಕಡಿಮೆ ನೀರಾವರಿ ಕ್ಷೇತ್ರವಿರುತ್ತದೆ. ಕರಾವಳಿ ಪ್ರದೇಶದ ತಾಲ್ಲೂಕುಗಳ ನೀರಾವರಿ ಕ್ಷೇತ್ರಗಳಿಗಿಂತ ಘಟ್ಟದ ಮೇಲಿನ ತಾಲ್ಲೂಕುಗಳ ನೀರಾವರಿ ಕ್ಷೇತ್ರಗಳು ಮೂರುಪಟ್ಟು ಹೆಚ್ಚಿಗೆ ಇರುತ್ತವೆ. ಮತ್ತು ಘಟ್ಟದ ಮೇಲಿನ ತಾಲ್ಲೂಕುಗಳು ಶಿರಸಿ ತಾಲ್ಲೂಕಿನ ಸಮೀಪವಿದ್ದು, ಸರ್ಕಾರದ ಕೆಲಸ ಕಾರ್ಯಗಳ ಹಿತದೃಷ್ಟಿಯಿಂದ ಹಳಿಯಾಳ, ಸಣ್ಣ ನೀರಾವರಿ ವಿಭಾಗ, ಕಾರ್ಯಪಾಲಕ ಇಂಜಿನಿಯರ್‌ರವರ ಕಚೇರಿಯನ್ನು ಶಿರಸಿಗೆ ಸ್ಥಳಾಂತರಿಸಿದಲ್ಲಿ ಆ ವಿಭಾಗದ ವ್ಯಾಪ್ತಿಯಲ್ಲಿನ ಎಲ್ಲಾ ಯೋಜನೆಗಳ ಉಸ್ತುವಾರಿ / ಪರಿವೀಕ್ಷಣೆಗೆ ಅನುಕೂಲವಾಗುವುದಲ್ಲದೆ ಇನ್ನೂ ಹೆಚ್ಚು ನೀರಾವರಿ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಿ ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡಬಹುದೆಂದು ತಿಳಿಸಿರುತ್ತಾರೆ.

ಮುಖ್ಯ ಇಂಜಿನಿಯರ್‌ರವರ ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುವ ಹಿನ್ನಲೆ ಹಾಗೂ ಹಳಿಯಾಳ ವಿಭಾಗದ ಕಾಮಗಾರಿಗಳು ಮತ್ತು ನೀರಾವರಿ ಕ್ಷೇತ್ರಗಳ ಅಂಕಿ ಅಂಶಗಳನ್ನು ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ಈ ಮುಂದಿನಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಹಳಿಯಾಳ ಕಚೇರಿಯನ್ನು ಆಡಳಿತ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಉತ್ತರ ಕನ್ನಡ ಜಿಲ್ಲೆಯ ಶಿರಸಿಗೆ ಸ್ಥಳಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1833

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು ಅಲಗಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 18/04/09ರ ಪತ್ರ ಸಂಖ್ಯೆ:ಮುಸನೀ(ದ)/ಲೆಶಾ/ಲೆಸ–1/ ಭೂಸ್ವಾಧೀನ/2009–10/908.

**ಪ್ರಸ್ತಾವನೆ:**

ಮೇಲೆ ಓದಲಾದ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು ಅಲಗಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಂಡಿಹಳ್ಳಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.1,82,042–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 12/01/89
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 14/08/91

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಟಿ.ನರಸೀಪುರ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 1849 ಎಲ್‌ಎಸ್‌ಎಂ 2005, ದಿನಾಂಕ 20/01/06ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂ. | ಬಂಡಿಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 1079/01 | 1546/1 | 2–28 | 1,82,042–00 |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 80 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009.**

ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು ಅಲಗಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಂಡಿಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.1,82,042–00 ಗಳನ್ನು (ಒಂದು ಲಕ್ಷದ ಎಂಭತ್ತೆರಡು ಸಾವಿರದ ನಲವತ್ತೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1759

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಅಂಬಾರಗೊಪ್ಪ ಗ್ರಾಮದ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ನಯೋಕಾ 2009, ದಿನಾಂಕ 05/02/09.

2. ದಿನಾಂಕ 30/05/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸ(ದ)/ತಾಂ–3/ಸಇಂ–8/ ಶಿವಮೊಗ್ಗ/ಅಂಬಾರಗೊಪ್ಪ/2009/2164.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/2407.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಅಂಬಾರಗೊಪ್ಪ ಗ್ರಾಮದ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 180.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್** | **ದಿ:13/01/09** |
| **2** | **ರಾಜ್ಯ ಟೆಂಡರ್ ಬುಲೆಟಿನ್** | **ದಿ:07/02/09** |
| **3** | **ಕನ್ನಡಪ್ರಭ ದಿನಪತ್ರಿಕೆ** | **ದಿ:08/02/09** |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 30/04/09ರಂದು ತೆರೆಯಲಾಗಿ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ನ್ನು ದಿನಾಂಕ 13/05/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ.1,78,19,978/–** |
|---|---|---|---|
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| **1** | **ಎಸ್.ಮಾಧವ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು** | **ರೂ.2,46,7,488/–** | **38.44 ಹೆಚ್ಚು** |

ಮೇಲ್ಕಂಡಂತೆ ಶ್ರೀ ಎಸ್.ಮಾಧವ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.2,46,70,488–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 38.44ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/06/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ

ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,78,19,978–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,03,14,775–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 29 ಅಪಿಬಂ 2009, ಬೆಂಗಳೂರು, ದಿನಾಂಕ: 15ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಅಂಬಾರಗೊಪ್ಪ ಗ್ರಾಮದ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.1,78,19,978–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,03,14,775–00ಗಳಿಗೆ (ಎರಡು ಕೋಟಿ ಮೂರು ಲಕ್ಷದ ಹದಿನಾಲ್ಕು ಸಾವಿರದ ಏಳುನೂರ ಎಪ್ಪತ್ತೈದು ರೂ.ಗಳು ಮಾತ್ರ) ಶ್ರೀ ಎಸ್. ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1760

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 12/06/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3464.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.1,41,773–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 13/07/1995
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 24/01/1997

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ.24,500/–ಗಳನ್ನು ಪಾವತಿಸುವಂತೆ ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಸರ್ಕಾರದ ಪರವಾಗಿ ಜಿಲ್ಲಾ ನ್ಯಾಯಾಲಯ, ಗುಲ್ಬರ್ಗಾ ಇಲ್ಲಿ ಮೇಲ್ಮನವಿ ಎಲ್‌ಎಸಿಎ 116/06ನ್ನು ದಾಖಲಿಸಿದ್ದು, ಜಿಲ್ಲಾ ನ್ಯಾಯಾಲಯವು ಮೇಲ್ಮನವಿಯನ್ನು ವಜಾಗೊಳಿಸಿದೆ. ಜಿಲ್ಲಾ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 1261 ಎಲ್‌ಸಿಜಿ 2008, ದಿನಾಂಕ 23/12/08ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಎಲ್ಎಸಿಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 28/99 | 116/06 | 26/2 | 2–00 | 1,41,773–00 |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 97 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 3ನೇ ಆಗಸ್ಟ್ 2009**

ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೌಳೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.1,41,773–00 ಗಳನ್ನು (ಒಂದು ಲಕ್ಷದ ನಲವತ್ತೊಂದು ಸಾವಿರದ ಏಳುನೂರ ಎಪ್ಪತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1831

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಬಂಡೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಂಡೇನಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 22/06/09ರ ಪತ್ರ ಸಂಖ್ಯೆ:ಮುಸದ/ಲೆಶಾದ/ಲೆಸ–1/ ಭೂಸ್ವಾಧೀನ/09–10/1456.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಬಂಡೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಂಡೇನಹಳ್ಳಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.4,12,817–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 15/10/1992
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 09/03/1995.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಮಂಡ್ಯ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ದಿನಾಂಕ 06/02/08ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಬಂಡೇನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 55/97 | 255 | 0–12 | 26821 |
| 2 | 56/97 | 257 | 0–22 | 49176 |
| 3 | 57/97 | 256 | 0–13 | 28059 |
| 4 | 58/97 | 258 | 0–12 | 26121 |
| 5 | 59/97 | 279 | 0–26 | 58113 |
| 6 | 60/97 | 277 | 0–27 | 60354 |
| 7 | 61/97 | 252 | 0–15 | 33529 |
| 8 | 62/97 | 250 | 0–10 | 22351 |
| 9 | 63/97 | 278 | 0–27 | 84942 |
| | | 247 | 0–11 | |
| 10 | 64/97 | 251 | 0–10 | 22351 |
| | ಒಟ್ಟು | | | **411817** |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 142 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಬಂಡೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಂಡೇನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.4,11,817–00ಗಳನ್ನು (ನಾಲ್ಕು ಲಕ್ಷದ ಹನ್ನೊಂದು ಸಾವಿರದ ಎಂಟುನೂರ ಹದಿನೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1832 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ (ಈಗ ರಾಮನಗರ ಜಿಲ್ಲೆ) ಮಾಗಡಿ ತಾಲ್ಲೂಕು ವೈ.ಜಿ.ಗುಡ್ಡ ಹೊಸಕೆರೆ ನೀರಾವರಿ ಯೋಜನೆಯ ಏರಿ ತೂಬು ಕೋಡಿ ಅಪ್ರೋಚ್ ಮತ್ತು ಡ್ರಾಪ್ಟ್ ಕಾಮಗಾರಿಯ ಏಕ ಮಧ್ಯಸ್ತಿಕೆದಾರರ ಐತೀರ್ಪಿನ ಮೇಲೆ ನ್ಯಾಯಾಲಯದಲ್ಲಿ ಚಾಲೆಂಚ್ ಮಾಡಲು ಸರ್ಕಾರದ ಪರ ವಾದಿಸಲು ಖಾಸಗಿ ವಕೀಲರನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ:** ಮು.ಇಂ. ಸ.ನೀ(ದ)ವಲಯ ಬೆಂಗಳೂರು ರವರ ಪತ್ರ ದಿ:25/05/09 ರಂದು ಕೊನೆಗೊಂಡ ಪತ್ರದ ಸಂಖ್ಯೆ: ಮುಸನೀ(ದ)ವ/ಲೆಶಾ/ಲೆಸ–1/ವೈ.ಜಿ.ಗುಡ್ಡ/ಏಕಮಧ್ಯಸ್ತಿಕೆ/2009–10/1196.

**ಪ್ರಸ್ತಾವನೆ:–**

ಬೆಂಗಳೂರು ಗ್ರಾಮಾಂತರ ಜಿಲ್ಲೆ (ಈಗ ರಾಮನಗರ ಜಿಲ್ಲೆ) ಮಾಗಡಿ ತಾಲ್ಲೂಕು ವೈ.ಜಿ.ಗುಡ್ಡ ಹೊಸಕೆರೆ ನಿರ್ಮಾಣ ಕಾಮಗಾರಿಯನ್ನು ವಿಶ್ವ ಬ್ಯಾಂಕ್ ನೆರವಿನಡಿಯಲ್ಲಿ ಕೈಗೊಂಡಿದ್ದು, ಯೋಜನೆಯ ಏರಿ, ತೂಬು, ಕೋಡಿ ಅಪ್ರೋಚ್ ಮತ್ತು

ಡ್ರಾಪ್ಟ್ ಕಾಲುವೆಯ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಮೆ: ಕನ್ಸಾಲಿಡೇಟೆಡ್ ಇಂಜಿನಿಯರಿಂಗ್ ಎಂಟರ್‌ಪ್ರೈಸಸ್ ರವರಿಗೆ ಎಲ್.ಸಿ.ಬಿ.ಟೆಂಡರ್ ಆಧಾರದ ಮೇಲೆ ನಿರ್ವಹಿಸಲು ವಹಿಸಲಾಗಿದೆ. ಈ ಕಾಮಗಾರಿಯಲ್ಲಿ ಗುತ್ತಿಗೆದಾರರು ಮತ್ತು ಇಲಾಖೆ ನಡುವೆ ಉಂಟಾದ ವಿವಾದಗಳನ್ನು ಇತ್ಯರ್ಥಗೊಳಿಸಲು ಎಲ್.ಸಿ.ಬಿ ಕರಾರಿನ ಕಂಡಿಕೆ 52 ರಂತೆ ಗುತ್ತಿಗೆದಾರರು ಏಕ ಮಧ್ಯಸ್ಥಿಕೆಗೆ ಹೋಗಿರುತ್ತಾರೆ.

ಶ್ರೀ ಬಿ.ಎಂ.ರಾಮ್‌ಪ್ರಸಾದ್, ಅಧೀಕ್ಷಕ ಅಭಿಯಂತರರು ಮಧ್ಯಸ್ಥಿಕೆದಾರರು ಸಭೆಗಳನ್ನು ದಿ:10/04/1999ರಂದು ತಮ್ಮ ತೀರ್ಪುನ್ನು ನೀಡಿರುತ್ತಾರೆ. ಸದರಿ ತೀರ್ಪಿನ ಮೇಲೆ ಇಲಾಖೆಯು ರಾಮನಗರ ಸಿವಿಲ್ ನ್ಯಾಯಾಲಯದಲ್ಲಿ ಚಾಲೆಂಜ್ ಮಾಡಲು ದಿ:05/07/1999ರಂದು ದಾವೆಯನ್ನು ಹೂಡಿದೆ. ನ್ಯಾಯಾಲಯವು ಅರ್ಜಿಯನ್ನು ಪರಿಶೀಲಿಸಿ ಆ ನ್ಯಾಯಾಲಯದ ವ್ಯಾಪ್ತಿಗೆ ಬರುವುದಿಲ್ಲವೆಂದು ದಿ:27/07/2000ರಂದು ಪ್ರಕರಣವನ್ನು ಹಿಂದಿರುಗಿಸಿರುತ್ತದೆ. ಇಲಾಖೆಯು ಎಲ್ಲಾ ದಾಖಲೆಗಳನ್ನು ಹಿಂದಕ್ಕೆ ಪಡೆದು ದಿನಾಂಕ: 21/08/2000ರಂದು ಬೆಂಗಳೂರು ಗ್ರಾಮಾಂತರ ಸಿವಿಲ್ ನ್ಯಾಯಾಲಯದಲ್ಲಿ ಮತ್ತೆ ದಾವೆಯನ್ನು ಹೂಡಲಾಗಿ ನ್ಯಾಯಾಲಯವು ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸುವ ಅವಧಿ ಮುಗಿದಿರುವುದಾಗಿ ಪ್ರಕರಣವನ್ನು ವಜಾ ಮಾಡಿರುತ್ತದೆ.

ಇಲಾಖೆಯು ಮತ್ತೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಪ್ರಕರಣವನ್ನು ದಾಖಲಿಸಿದ್ದು, ರಾಜ್ಯ ಉಚ್ಚ ನ್ಯಾಯಾಲಯವು ಇಲಾಖೆ ಪರ ದಿನಾಂಕ:04/04/2005 ರಂದು ತೀರ್ಪು ನೀಡಿರುತ್ತದೆ. ಉಚ್ಚ ನ್ಯಾಯಾಲಯದ ತೀರ್ಪಿನ ಮೇಲೆ ಗುತ್ತಿಗೆ ಸಂಸ್ಥೆಯು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಕರಣದ ಸಂಖ್ಯೆ: ಕೆ.ಎಸ್.ಎಲ್.ಪಿ(ಸಿವಿಲ್)10311/2005ರಲ್ಲಿ ದಾವೆ ದಾಖಲಿಸಿರುತ್ತದೆ. ಈ ದಾವೆಯನ್ನು ಸರ್ವೋಚ್ಚ ನ್ಯಾಯಾಲಯವು ಪರಿಶೀಲಿಸಿ ದಿನಾಂಕ:03/04/2008 ರಂದು ಪ್ರಕರಣವನ್ನು ವಜಾಗೊಳಿಸಿ ಇಲಾಖೆ ಪರ ತೀರ್ಪು ನೀಡಿರುತ್ತದೆ. ಮತ್ತೆ ಪ್ರಕರಣವು ಬೆಂಗಳೂರು ಗ್ರಾಮಾಂತರ ಸಿವಿಲ್ ನ್ಯಾಯಾಲಯದಲ್ಲಿ ಮುಂದುವರೆದು ಈಗ ರಾಮನಗರ ಸಿವಿಲ್ ನ್ಯಾಯಾಲಯಕ್ಕೆ ವರ್ಗಾವಣೆಯಾಗಿದೆ. ಈ ಪ್ರಕರಣದಲ್ಲಿ ರಾಜ್ಯ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಇರುವುದರಿಂದ ರಾಮನಗರ ಸಿವಿಲ್ ನ್ಯಾಯಾಲಯದಲ್ಲಿ ಸರ್ಕಾರದ ವಾದವನ್ನು ಸಮರ್ಥವಾಗಿ ಮಂಡಿಸಲು ಏಕಮಧ್ಯಸ್ಥಿಕೆ ಕಾಯ್ದೆಗಳ ಬಗ್ಗೆ ಪರಿಪೂರ್ಣ ಜ್ಞಾನ ಹಾಗೂ ಪ್ರಕರಣ ನಿರ್ವಹಣೆಯಲ್ಲಿ ನಿಪುಣತೆಯುಳ್ಳ ವಕೀಲರನ್ನು ನೇಮಿಸುವ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಮುಖ್ಯ ಇಂಜಿನಿಯರ್‌ರವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎಂ.ಎಸ್.ಭಾಗವತ್, ಉಚ್ಚ ನ್ಯಾಯಾಲಯದ ವಕೀಲರು, ಬೆಂಗಳೂರು ರವರನ್ನು ನೇಮಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿಯವರಿಗೆ ಪಾವತಿಸಬೇಕಾದ ಅಂದಾಜು ಮೊತ್ತ ರೂ.8,35,000/–ಗಳಾಗುತ್ತದೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ದಾಮಪ್ರ 2005 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ (ಈಗ ರಾಮನಗರ ಜಿಲ್ಲೆ) ಮಾಗಡಿ ತಾಲ್ಲೂಕು ವೈ.ಜಿ.ಗುಡ್ಡ ಹೊಸಕೆರೆ ನಿರ್ಮಾಣ ಕಾಮಗಾರಿಯ ಏಕ ಮಧ್ಯಸ್ಥಿಕೆದಾರರ ಐತೀರ್ಪಿನ ವಿರುದ್ಧ ರಾಮನಗರ ಸಿವಿಲ್ ನ್ಯಾಯಾಲಯದಲ್ಲಿ ಸರ್ಕಾರದ ಪರ ವಾದಿಸಲು ಖಾಸಗಿ ವಕೀಲರಾದ ಶ್ರೀ ಎಂ.ಎಸ್.ಭಾಗವತ್, ಉಚ್ಚ ನ್ಯಾಯಾಲಯದ ವಕೀಲರನ್ನು ನೇಮಕ ಮಾಡಲಾಗಿದೆ. ಸದರಿಯವರಿಗೆ ಅವರ ಉಲ್ಲೇಖಿತ ನಿಬಂಧನೆಗಳ ಪ್ರಕಾರ ಪಾವತಿಸಬೇಕಾದ 8,35,000/–ರೂ.ಗಳನ್ನು ಲೆಕ್ಕಶೀರ್ಷಿಕೆ 4702–00–101–02–139(ಯೋಜನೆ) ಹೊಸಕೆರೆಗಳು ಪ್ರಧಾನ ಕಾಮಗಾರಿಗಳ ಅಡಿ ಭರಿಸುವುದು.

ಈ ಆದೇಶವನ್ನು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 530 ಅಭಿಪ್ರಾಯ 2008ರಲ್ಲಿ ದಿನಾಂಕ:23/06/2009 ರಂದು ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 552 ಎಫ್‌ಸಿ–1/2009 ದಿನಾಂಕ:27/07/2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1887

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸರ್ವೆ ನಂ.48ರ ಹತ್ತಿರ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ನಯೋಕಾ 2009, ದಿನಾಂಕ 05/02/09.
2. ದಿನಾಂಕ 03/06/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ತಾಂ–4/ಸಇಂ–10/ ದಾವಣಗೆರೆ/ಹರಿಹರ/ ಕೊಂಡಜ್ಜಿ ಗ್ರಾಮ/ಸ.ನಂ.48/2009/ 2229.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ14/07/09ರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/ 08–09/1695.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸರ್ವೆ ನಂ.48ರ ಹತ್ತಿರ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ 40.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ಜಿಲ್ಲಾ ಟೆಂಡರ್ ಬುಲೆಟಿನ್** | **ದಿನಾಂಕ 13/02/09** |
| **2** | **ಸಂಯುಕ್ತ ಕರ್ನಾಟಕ ಹಾಗೂ ಪ್ರಜಾವಾಣಿ ದಿನಪತ್ರಿಕೆಗಳು** | **ದಿನಾಂಕ 14/02/09** |

ಕಾರಣಾಂತರಗಳಿಂದ ಟೆಂಡರ್‌ನ್ನು ಮುಂದೂಡಿದ್ದು, ದಿನಾಂಕ 17/02/09ರಂದು ತಿದ್ದುಪಡಿ ಪ್ರಕಟಣೆ ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 11 ಜನ ಗುತ್ತಿಗೆದಾರರು ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ದಿನಾಂಕ 01/04/09ರಂದು ತೆರೆಯಲಾಗಿದೆ. ಸ್ವೀಕೃತವಾದ ಟೆಂಡರ್‌ಗಳ ವಿವರ ಕೆಳಕಂಡಂತಿದೆ:

| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ.38,58,199/–** |
|---|---|---|---|
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| **1** | **ಓ.ವೀರಭದ್ರಪ್ಪ, 1ನೇ ದರ್ಜೆ ಗುತ್ತಿಗೆದಾರರು** | **ರೂ.45,81,208/–** | **18.74 ಹೆಚ್ಚು** |
| **2** | **ಆರ್.ವಿರುಪಾಕ್ಷಪ್ಪ, 1ನೇ ದರ್ಜೆ ಗುತ್ತಿಗೆದಾರರು** | **ರೂ.47,83,362/–** | **23.98 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಓ.ವೀರಭದ್ರಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.45,81,208–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.74ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 30/06/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.38,58,199–00ಗಳ ಮೇಲೆ ಶೇಕಡ 13.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.43,63,623–00ಗಳಿಗೆ ಕಾಮಗಾರಿಯನ್ನು ಶ್ರೀ ಓ.ವೀರಭದ್ರಪ್ಪ, 1ನೇ ದರ್ಜೆ ಗುತ್ತಿಗೆದಾರರು, ದಾವಣಗೆರೆ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 33 ಅಪಿಬಿಂ 2009, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸರ್ವೆ ನಂ.48ರ ಹತ್ತಿರ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.38,58,199–00ಗಳ ಮೇಲೆ ಶೇಕಡ 13.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.43,63,623–00ಗಳಿಗೆ (ನಲವತ್ಮೂರು ಲಕ್ಷದ ಅರವತ್ಮೂರು ಸಾವಿರದ ಆರುನೂರ ಇಪ್ಪತ್ಮೂರು

ರೂ.ಗಳು ಮಾತ್ರ) ಶ್ರೀ ಓ.ವೀರಭದ್ರಪ್ಪ, 1ನೇ ದರ್ಜೆ ಗುತ್ತಿಗೆದಾರರು, ದಾವಣಗೆರೆ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1888 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಗೊಬ್ಬೂರ(ಕೆ) ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 12/06/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3460.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಗೊಬ್ಬೂರ(ಕೆ) ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗೊಬ್ಬೂರ(ಕೆ) ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.3,35,449–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 26/06/2003
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06/07/2004

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 223 ಎಲ್‌ಸಿಜಿ 2009, ದಿನಾಂಕ 27/01/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಗೊಬ್ಬೂರ(ಕೆ) ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 190/04 | 12/2 | 5–02 | 3,35,449–00 |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 96 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2009**

ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಗೊಬ್ಬೂರ(ಕೆ) ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗೊಬ್ಬೂರ(ಕೆ) ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.3,35,449–00ಗಳನ್ನು (ಮೂರು ಲಕ್ಷದ ಮೂವತ್ತೈದು ಸಾವಿರದ ನಾನೂರ ನಲವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ

ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1889 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ನಿಡಶೇಸಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ನಿಡಶೇಷಿ, ಬ್ಯಾಲಿಹಾಳ ಮತ್ತು ಬೆಂಚಮಟ್ಟಿ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನ ಅನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 30/05/2009ರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009–10/3130.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ನಿಡಶೇಸಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ, ಬ್ಯಾಲಿಹಾಳ ಮತ್ತು ಬೆಂಚಮಟ್ಟಿ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06/12/2001.

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 23/10/2003.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 1356 ಎಲ್‌ಸಿಜಿ 2008, ದಿನಾಂಕ 01/01/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಸ.ನಂ | ವಿಸ್ತೀರ್ಣ ಎ–ಗಂ | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 58/7 | 25/ಎ | 1–08 | ನೀಡಶೇಸಿ | 407556 |
| 2 | 60/07 | 29/ಎ | 0–20 | ನೀಡಶೇಸಿ | 170107 |
| 3 | 61/07 | 12/3 | 2–07 | ಬ್ಯಾಲಿಹಾಳ | 747672 |
| 4 | 62/07 | 13/ಕೆ2 | 2–02 | ಬ್ಯಾಲಿಹಾಳ | 704729 |
| 5 | 63/07 | 17/4 | 0–18 | ಬ್ಯಾಲಿಹಾಳ | 155087 |
| 6 | 64/07 | 17/5 | 1–08 | ಬ್ಯಾಲಿಹಾಳ | 412730 |
| 7 | 65/07 | 17/6 | 1–38 | ಬ್ಯಾಲಿಹಾಳ | 670377 |
| 8 | 66/07 | 17/7ಎ | 1–12 | ಬ್ಯಾಲಿಹಾಳ | 447083 |

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಸ.ನಂ | ವಿಸ್ತೀರ್ಣ ಎ–ಗಂ | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 9 | 67/07 | 22/ಬಿ | 0–20 | ಬ್ಯಾಲಿಹಾಳ | 172264 |
| 10 | 68/07 | 10/1ಬಿ | 3–15 | ಬ್ಯಾಲಿಹಾಳ | 1159902 |
| 11 | 69/07 | 10/1ಎಎ | 2–39 | ಬ್ಯಾಲಿಹಾಳ | 1022493 |
| 12 | 70/07 | 9/ಎ | 0–19 | ಬ್ಯಾಲಿಹಾಳ | 163677 |
| 13 | 71/07 | 12/3ಎ | 1–11 | ಬೆಂಚಮಟಿ | 432603 |
| 14 | 73/07 | 23/ಯು | 1–20 | ನೀಡಶೇಸಿ | 509327 |
| | | **ಒಟ್ಟು** | | | **7175607** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 85 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ನಿಡಶೇಸಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ನಿಡಶೇಸಿ, ಬೆಂಚಮಟ್ಟಿ ಹಾಗೂ ಬ್ಯಾಲಿಹಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ.71,75,607–00ಗಳನ್ನು (ಎಪ್ಪತ್ತೊಂದು ಲಕ್ಷದ ಎಪ್ಪತ್ತೈದು ಸಾವಿರದ ಆರು ನೂರ ಏಳು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಡೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1890

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 10/06/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3388.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಂತಪನಾಳ ಮತ್ತು ಭೂಯ್ಯಾರ ಗ್ರಾಮಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.2,43,662–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 30/10/1996
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 28/05/1999

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ (ಹಿರಿಯ ಶ್ರೇಣಿ)

ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಸರ್ಕಾರದ ಪರವಾಗಿ ಜಿಲ್ಲಾ ನ್ಯಾಯಾಲಯ, ಗುಲ್ಬರ್ಗಾದಲ್ಲಿ ಮೇಲ್ಮನವಿಗಳನ್ನು(ಎಲ್‌ಎಸಿಎ) ದಾಖಲಿಸಿದ್ದು, ಸದರಿ ಮೇಲ್ಮನವಿಗಳು ವಜಾಗೊಂಡಿರುತ್ತವೆ.

ಜಿಲ್ಲಾ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 95 ಎಲ್‌ಸಿಜಿ 2009, ದಿನಾಂಕ 05/01/09ರಲ್ಲಿ ಅಭಿಪ್ರಾಯ ನೀಡಿದೆ.

ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂ. | ಎಲ್‌ಎಸಿಎ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|---|
| 1 | 644/2000 | 342/2004 | 28/1 | 0–33 | ಅಂತಪನಾಳ | 182647 |
| 2 | 626/2000 | 342/2004 | 32/1 | 0–11 | ಭೂಯ್ಯಾರ | 61015 |
| | ಒಟ್ಟು | | | | | **243662** |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 92 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಭೂಯ್ಯಾರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಅಂತಪನಾಳ ಮತ್ತು ಭೂಯ್ಯಾರ ಗ್ರಾಮಗಳಿಗೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು/ಉಚ್ಚ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.2,43,662–00 ಗಳನ್ನು (ಎರಡು ಲಕ್ಷದ ನಲವತ್ತ್ಮೂರು ಸಾವಿರದ ಆರುನೂರ ಅರವತ್ತೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1914 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 28/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/3070.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕನ್ನಾಳ ಮತ್ತು ಸಂಗನಾಳ ಗ್ರಾಮಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 27/02/03
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06/12/05.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 1080 ಎಲ್‌ಸಿಜಿ 2008 ದಿನಾಂಕ 06/02/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 521/08 | 19/3ಡಿ | ಕನ್ನಾಳ | 0–25 | 181876 |
| 2 | 522/08 | 61/1 | ಸಂಗನಾಳ | 0–20 | 145605 |
| 3 | 524/08 | 16/2ಕೆ | ಕನ್ನಾಳ | 0–28 | 377762 |
| | | 19/3ಬಿ | | 0–24 | |
| 4 | 525/08 | 21/1/2ಅ | ಕನ್ನಾಳ | 1–17 | 450311 |
| | | 22/2 | | 0–15 | |
| | ಒಟ್ಟು | | | | **1155554** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 82 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮೇಲ್ಕಂಡ ಗ್ರಾಮಗಳ ಸ.ನಂ.ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.11,55,554–00ಗಳನ್ನು (ಹನ್ನೊಂದು ಲಕ್ಷದ ಐವತ್ತೈದು ಸಾವಿರದ ಐನೂರ ಐವತ್ತ್ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1915

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು ಕುಮಠೆ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ನೀಡಿರುವ ಐತೀರ್ಪಿನಂತೆ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 22/05/2009ರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ ಬಿಜಾ/ಭೂಸ್ವಾಪ್ರ/2009–10/2982.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಬಿಜಾಪುರ ತಾಲ್ಲೂಕು, ಕುಮಠೆ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕುಮಠೆ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಲಾದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 03/07/1975.

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 21/09/1981.

ಸದರಿ ಭೂಸ್ವಾಧೀನ ಪ್ರಕ್ರಿಯೆಲ್ಲಿ ಸೇರಿದ್ದ ಕೆಲವೊಂದು ಸರ್ವೆ ನಂಬರ್‌ಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಿಜಾಪುರ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಎಲ್.ಎ.ಸಿ 110/2001 ನ್ನು ದಾಖಲಿಸಿ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪುನ್ನು ಪಡೆದುಕೊಂಡಿರುತ್ತಾರೆ.

ಸಿವಿಲ್ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 1769 ಎಲ್‌ಬಿಎಸ್ 2005 ದಿನಾಂಕ: 30/01/2006ರಲ್ಲಿ ಅಭಿಪ್ರಾಯ ನೀಡಿದೆ.

ಸದರಿ ಎಲ್.ಎ.ಸಿ ಪ್ರಕರಣವನ್ನು ಉಲ್ಲೇಖಿಸಿ ಇದೇ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಕುಮಠೆ ಗ್ರಾಮದ ಕೆಳಗೆ ತಿಳಿಸಿರುವ ಸರ್ವೆ ನಂಬರ್‌ಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಬಿಜಾಪುರ ಉಪವಿಭಾಗಾಧಿಕಾರಿಗಳು ಈ ಕಾಯ್ದೆ ಅಡಿ ಸದರಿ ಸರ್ವೆ ನಂಬರ್‌ಗಳ ಜಮೀನುಗಳಿಗೆ ದಿನಾಂಕ: 31/12/2008 ರಂದು ಸಿವಿಲ್ ನ್ಯಾಯಾಲಯವು ನಿಗಧಿಪಡಿಸಿದ ಭೂಮೌಲ್ಯವನ್ನೊಳಗೊಂಡಂತೆ ಹೆಚ್ಚಿನ ಪರಿಹಾರ ಧನಕ್ಕಾಗಿ ಐತೀರ್ಪುನ್ನು ರಚಿಸಿರುತ್ತಾರೆ.

ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿದ ಐತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿ ಪ್ರಕರಣಗಳ ವಿವರ ಕೆಳಕಂಡಂತಿದೆ:

(ಲಕ್ಷ ರೂ.ಗಳಲ್ಲಿ)

| ಕ್ರ. ಸ. | ಕುಮಠೆ ಗ್ರಾಮದ ಸರ್ವೆ ನಂ | ವಿಸ್ತೀರ್ಣ ಎ–ಗಂ | ಭೂಸ್ವಾಧೀನ ಕಲಂ 28(ಎ)ರಡಿಯಲ್ಲಿ ಎಲ್.ಎ.ಸಿ ಸಂ: 110/01ರ ಆಧಾರದ ಮೇಲೆ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 01 | 12/1+2 | 1–11 | ಉಪವಿಭಾಗಾಧಿಕಾರಿಗಳು ಬಿಜಾಪುರ ಇವರ ಐತೀರ್ಪು ಸಂಖ್ಯೆ: ಎಲ್.ಎ.ಕ್ಯೂ. 811 28(ಎ) ಸಿ. ಆರ್ ಕುಮಠೆ ಬಿಜಾಪುರ ದಿ: 31/12/2008 | 157990 |
| 02 | 11 | 5–00 | " | 619572 |
| 03 | 12/1+2ಕ | 2–11 | " | 265179 |
| 04 | 12/1+2ಡ | 2–11 | " | 262293 |
| 05 | 15/2 | 1–21 | " | 186093 |
| 06 | 12/1+2ಇ | 2–12 | " | 261426 |
| 07 | 15/1 | 4–34 | " | 575013 |
| 08 | 15/4 | 3–29 | " | 441628 |
| 09 | 15/3 | 0–24 | " | 69906 |
| 10 | 12/1+2ಬಿ2 | 1–29 | " | 198881 |
| | | | **ಒಟ್ಟು** | **3037981** |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 83 ಭೂಸ್ವಾಪ್ರ 2009 ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಬಿಜಾಪುರ ಜಿಲ್ಲೆ, ಬಿಜಾಪುರ ತಾಲ್ಲೂಕು, ಕುಮಠೆ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕುಮಠೆ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ. 30,37,981.00 ಗಳನ್ನು

(ಮೂವತ್ತು ಲಕ್ಷದ ಮೂವತ್ತೇಳು ಸಾವಿರದ ಒಂಭೈನೂರ ಎಂಭತ್ತೊಂದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಡೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1916

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು ನಿಲುವಂಜಿ ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಲುವಂಜಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

ಓದಲಾಗಿದೆ: ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 10/06/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3391.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು ನಿಲುವಂಜಿ ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಲುವಂಜಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 20/07/95
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06/02/97

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಯಚೂರು ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 1 ಎಲ್‌ಸಿಜಿ 2008, ದಿನಾಂಕ 14/05/08ರಲ್ಲಿ ಅಭಿಪ್ರಾಯ ನೀಡಿದೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ನಿಲುವಂಜಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 71/98 | 36/ಸಿ | 0–03 | 5190 |
| 2 | 72/98 | 39/2/3<br>39/1/3 | 0–19 | 32873 |
| 3 | 73/98 | 81/2/2ಬಿ | 0–20 | 34604 |
| 4 | 74/98 | 35/2ಸಿ, 35/3ಸಿ, 35/4ಸಿ | 0–06 | 10380 |
| 5 | 75/98 | 76/1/1ಸಿ | 0–16 | 27682 |
| 6 | 76/98 | 6/1ಬಿ, 6/3ಬಿ, 6/4ಬಿ | 0–14 | 24221 |

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ನಿಲುವಂಜಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 7 | 77/98 | 74/4ಬಿ, 74/4ಇ,74/1ಸಿ | 0–39 | 67477 |
| 8 | 78/98 | 73/2ಸಿ, 73/3ಸಿ | 0–06 | 10380 |
| 9 | 79/98 | 4/3 | 0–15 | 25952 |
| 10 | 80/98 | 4/ಸಿ | 0–12 | 20671 |
| 11 | 81/98 | 23/5 | 0–26 | 44984 |
| 12 | 82/98 | 80/8ಸಿ | 0–03 | 5190 |
| | **ಒಟ್ಟು** | | | **309604** |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 93 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು ನಿಲುವಂಜಿ ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಲುವಂಜಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.3,09,604–00ಗಳನ್ನು (ಮೂರು ಲಕ್ಷದ ಒಂಭತ್ತು ಸಾವಿರದ ಆರುನೂರ ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1917 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಮಾದನ ಹಿಪ್ಪರಗಾ ನಾಲಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೆರೂರು ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 03/10/07ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ 2007–08/7466.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಮಾದನ ಹಿಪ್ಪರಗಾ ನಾಲಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೆರೂರು ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.2,46,869–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 24/12/1981
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 29/04/1983

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಆಳಂದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 1631 ಎಲ್ಎಸ್‌ಪಿ 2006 ಹಾಗೂ ಲಾ 1682 ಎಲ್ಎಸ್‌ಪಿ 2006, ದಿನಾಂಕ 11/09/06ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂ. | ಕೆರೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 356/03 | 82/2 | 2–32 | 51401 |
| 2 | 357/03 | 82/1 | 10–29 | 195468 |
| | ಒಟ್ಟು | | | **246869** |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 149 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಮಾದನ ಹಿಪ್ಪರಗಾ ನಾಲಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೆರೂರು ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.2,46,869–00ಗಳನ್ನು (ಎರಡು ಲಕ್ಷದ ನಲವತ್ತಾರು ಸಾವಿರದ ಎಂಟುನೂರ ಅರವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1918

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ 09/06/2009 ರಂದು ಅಂತ್ಯಗೊಂಡಿರುವ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009–10/3362.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ.08/02/1996
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 02/01/1999.
- ಸ್ವಾಧೀನಕ್ಕೊಳಪಟ್ಟ ಜಮೀನುಗಳ ಕಬ್ಜೆ ಪಡೆದ ದಿನಾಂಕ: 25/03/1997.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಿಜಾಪುರ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸದರಿ ತೀರ್ಪಿನ ವಿರುದ್ಧ ಸರ್ಕಾರದ ವತಿಯಿಂದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ಸಂಖ್ಯೆ. 8789/2004ನ್ನು ದಾಖಲಿಸಿದ್ದು, ಸದರಿ ಎಂ.ಎಫ್.ಎ.ಯು ಉಚ್ಚ ನ್ಯಾಯಾಲಯದಿಂದ ವಜಾಗೊಂಡಿರುತ್ತವೆ.

ಉಚ್ಚ ನ್ಯಾಯಾಲಯದ ತೀರ್ಪಿಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 119 ಎಲ್‌ಬಿಎಸ್ 2008 ದಿನಾಂಕ: 05/02/2008ರಲ್ಲಿ ಅಭಿಪ್ರಾಯ ನೀಡಿದೆ.

ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಂಎಫ್ಎ ಸಂಖ್ಯೆ | ಎಲ್ಎಸಿ ಪ್ರಕರಣ ಸಂಖ್ಯೆ | ಬೊಮ್ಮನಜೋಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| **1** | **8789/04** | **192/2000** | **13/1<br>13/2<br>13/3** | **16–00** | **40,04,638/–** |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 62 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 27ನೇ ಜುಲೈ 2009**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬೊಮ್ಮನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ.40,04,638/–ಗಳನ್ನು (ನಲವತ್ತು ಲಕ್ಷದ ನಾಲ್ಕು ಸಾವಿರದ ಆರುನೂರ ಮೂವತ್ತೆಂಟು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1919 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಕಡ್ಲೇವಾಡ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ 17/10/2008 ರಂದು ಅಂತ್ಯಗೊಂಡಿರುವ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2008–09/5563

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಕಡ್ಲೇವಾಡ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ.18/05/1978
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 27/09/1979

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಿಜಾಪುರ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಸರ್ಕಾರದ ಪರ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಎಂ.ಎಫ್.ಎ.ಗಳನ್ನು ದಾಖಲಿಸಲಾಗಿದ್ದು, ಸದರಿ ಎಂ.ಎಫ್.ಎ.ಗಳು ಉಚ್ಚ ನ್ಯಾಯಾಲಯದಿಂದ ವಜಾಗೊಂಡಿರುತ್ತವೆ.

ಉಚ್ಚ ನ್ಯಾಯಾಲಯದ ತೀರ್ಪಿಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 535 ಎಲ್‌ಬಿಎಸ್ 2006 ದಿನಾಂಕ22/03/2006 ಮತ್ತು ಪತ್ರ ಸಂಖ್ಯೆ:ಲಾ 973 ಎಲ್‌ಬಿಎಸ್ 2006 ದಿನಾಂಕ16/10/2006 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂ. | ಎಂಎಫ್‌ಎ ಸಂ. | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 556/99 | 8358/04 | 78<br>11 | 4–00(ನೀರಾವರಿ)<br>2–10(ಖುಷ್ಕಿ) | 163331 |
| 2 | 557/99 | 8359/04 | 75/1<br>75/2 | 8–24(ನೀರಾವರಿ)<br>4–03(ಖುಷ್ಕಿ) | 38649 |
| 3 | 559/99 | 8361/04 | 567/2<br>11 | 3–00(ನೀರಾವರಿ)<br>5–37(ಖುಷ್ಕಿ) | 131799 |
| | ಒಟ್ಟು | | | | 333779 |

**ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 62 ಭೂಸ್ವಾಪ್ರ 2003, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಬಿಜಾಪುರ ಜಿಲ್ಲೆ,ಸಿಂಧಗಿ ತಾಲ್ಲೂಕು ಕಡ್ಲೇವಾಡ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಡ್ಲೇವಾಡ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.3,33,779–00ಗಳನ್ನು (ಮೂರು ಲಕ್ಷದ ಮೂವತ್ಮೂರು ಸಾವಿರದ ಏಳನೂರ ಎಪ್ಪತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1920

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಡೋಣಗಾಪುರ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ) ಪ್ರಕಾರ ವಿಶೇಷ ಭೂಸ್ವಾಧೀನಾಧಿಕಾರಿಗಳು(ಕಾರಂಜಾ ಯೋಜನೆ) ಬೀದರ್ ರವರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 05/03/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/08–09/ 1766.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 05/03/09ರ ಪತ್ರದಲ್ಲಿ ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಡೋಣಗಾಪುರ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ವಿಶೇಷ ಭೂಸ್ವಾಧೀನಾಧಿಕಾರಿಗಳು (ಕಾರಂಜಾ ಯೋಜನೆ) ಬೀದರ್ ರವರು ಹೊರಡಿಸಿರುವ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ.30,06,772–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 18/08/94
- ಮೂಲ ಪರಿಹಾರ ಧನದ ಐತೀರ್ಪಿನ ದಿನಾಂಕ 09/11/98

ಮೇಲ್ಕಂಡ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಡೋಣಗಾಪುರ ಗ್ರಾಮದ ಸ.ನಂ.ಗಳ ಕೆಲವು ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:16/02ರಲ್ಲಿ ಮಾನ್ಯ ಬೀದರ್‌ನ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ಆದೇಶಿಸಿದೆ. ಈ ತೀರ್ಪನ್ನು ಉಲ್ಲೇಖಿಸಿ ಈ ಭೂಸ್ವಾಧೀನ ಪ್ರಕರಣದಲ್ಲಿ ಸೇರಿದ್ದ ಈ ಕೆಳಕಂಡ ಇತರೆ ಸ.ನಂ. ಗಳ ಭೂಮಾಲೀಕರು ಅವರ ಜಮೀನುಗಳಿಗೂ ಸಹ ಹೆಚ್ಚಿನ ಪರಿಹಾರ ಧನ ಪಾವತಿಸಲು ಕೋರಿ ಅರ್ಜಿ ಸಲ್ಲಿಸಿದ್ದರ ಮೇರೆಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕಾರಂಜಾ ಯೋಜನೆ, ಬೀದರ್ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ದಿನಾಂಕ 18/10/08ರಂದು ಹೆಚ್ಚಿನ ಪರಿಹಾರ ಧನದ ಐತೀರ್ಪು ಹೊರಡಿಸಿರುತ್ತಾರೆ. ಈ ಐತೀರ್ಪಿನಲ್ಲಿ ಸೇರಿರುವ ಸ.ನಂ.ವಾರು ಕ್ಷೇತ್ರದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಡೋಣಗಾಪುರ ಸ.ನಂ. | ವಿಸ್ತೀರ್ಣ ಎ–ಗುಂ. | ಭೂ.ಸ್ವಾ. ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 236/ಎ | 3–00 | ಎಲ್‌ಎಕ್ಯೂ/ಎಂಐ/ ಸಿಆರ್–17/08–09 ದಿನಾಂಕ 18/10/08 | 991242 |
| 2 | 237/ಯು | 6–04 | –"– | 2015530 |
| | ಒಟ್ಟು | | | **3006772** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 61 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 13ನೇ ಜುಲೈ 2009.**

ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಡೋಣಗಾಪುರ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಬೀದರ್‌ನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕಾರಂಜಾ ಯೋಜನೆ ರವರು ನೀಡಿರುವ ಐತೀರ್ಪಿನಂತೆ ಪರಿಹಾರ ಧನದ ಮೊತ್ತ ರೂ30,06,772–00ಗಳನ್ನು (ಮೂವತ್ತು ಲಕ್ಷದ ಆರು ಸಾವಿರದ ಏಳುನೂರ ಎಪ್ಪತ್ತೆರಡು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ

ತಿಳಿಸಿರುವ ಸ.ನಂ.ಗಳಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1921 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 10/07/09ರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/3/ ಭೂಸ್ವಾಧೀನ/09–10/1656.

**ಪ್ರಸ್ತಾವನೆ:**

ಮೇಲೆ ಓದಲಾದ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೊಡ್ಡಮರಳವಾಡಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.3,86,137–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29/01/1987
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 22/11/1990

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಮನಗರದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 252 ಎಲ್‌ಎಸಿ(ಎಲ್‌ಸಿ) 2007, ದಿನಾಂಕ 16/12/08ರಲ್ಲಿ ಅಭಿಪ್ರಾಯ ನೀಡಿದೆ.

ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ದೊಡ್ಡಮರಳವಾಡಿ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 4/06 | 239 | 1–20 | 3,86,137–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 78 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೊಡ್ಡಮರಳವಾಡಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.3,86,137–00ಗಳನ್ನು (ಮೂರು ಲಕ್ಷದ ಎಂಭತ್ತಾರು ಸಾವಿರದ ಒಂದು ನೂರ ಮೂವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ

ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1946

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕು ಹೂವಿನ ಹಿಪ್ಪರಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಬಗ್ಗೆ

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 13/11/2008ರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ ಬಿಜಾ/ಭೂಸ್ವಾಪ್ರ/2008–09/6003.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಬಸವನ ಬಾಗೇವಾಡಿ ತಾಲ್ಲೂಕು, ಹೂವಿನ ಹಿಪ್ಪರಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಬಸವನ ಬಾಗೇವಾಡಿ ಎಲ್.ಎ.ಸಿ ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 8,33,234/–ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 29/01/1987.

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 12/02/1988.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಸವನ ಬಾಗೇವಾಡಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 1131 ಎಲ್‌ಸಿಬಿ 2008 ದಿನಾಂಕ: 16/04/2009ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

(ಲಕ್ಷ ರೂ.ಗಳಲ್ಲಿ)

| ಕ್ರ. ಸ. | ಎಲ್‌ಎಸಿ ಪ್ರಕರಣ ಸಂಖ್ಯೆ | ಸಂಕನಾಳ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 01 | 7/05 | 96/2ಎ | 0–36 | 170613 |
| 02 | 8/05 | 96/2ಕ | 3–20 | 662621 |
| | **ಒಟ್ಟು** | | **4–16** | **833234** |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 155 ಭೂಸ್ವಾಪ್ರ 2009 ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2009**

ಬಿಜಾಪುರ ಜಿಲ್ಲೆ, ಬಸವನ ಬಾಗೇವಾಡಿ ತಾಲ್ಲೂಕು, ಹೂವಿನ ಹಿಪ್ಪರಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸಂಕನಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಪ್ರಕರಣಗಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 8,33,234.00 ಗಳನ್ನು (ಎಂಟು ಲಕ್ಷದ ಮೂವತ್ತೂರು ಸಾವಿರದ ಇನ್ನೂರ ಮೂವತ್ತನಾಲ್ಕು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆ ಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1947 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಗೌರವಧನ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:155:ಜಿಪಸ:2003ದಿ:1–8–2003

2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:214:ಜಿಪಸ:2008 ದಿ:25–02–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ಸರ್ಕಾರದ ಆದೇಶದಲ್ಲಿ ಜಿಲ್ಲಾ ಪಂಚಾಯತ್:ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯತಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳಿಗೆ ಗೌರವ ಧನ ಉಪವೇಶನ ಶುಲ್ಕ ಹಾಗೂ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಸದಸ್ಯರುಗಳಿಗೆ ಉಪವೇಶನ ಶುಲ್ಕ ನಿಗದಿಗೊಳಿಸಿ ಅದನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತ್ : ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳು ತಮ್ಮ ಸಂಪನ್ಮೂಲಗಳಿಂದ ಭರಿಸುವಂತೆ ಆದೇಶಿಸಲಾಗಿದೆ.

2008–09 ನೇ ಸಾಲಿನಲ್ಲಿ ಗೌರವಧನ ಪಾವತಿಸಲು ಅನುದಾನವನ್ನು ಉಲ್ಲೇಖಿತ (2) ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. 2009–10ನೇ ಸಾಲಿನಲ್ಲಿ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಗೌರವಧನ ಪಾವತಿಸಲು ಅವಶ್ಯವಿರುವ ಅನುದಾನದ ಮೊತ್ತ ರೂ.27.45 ಕೋಟಿಗಳನ್ನು 2009–10ನೇ ಸಾಲಿನಲ್ಲಿ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಉದ್ದೇಶಿಸಿರುವ ಶಾಸನ ಬದ್ಧ ಅನುದಾನದ ಮೊತ್ತದಿಂದ ಬಿಡುಗಡೆ ಗೊಳಿಸುವ ಬಗ್ಗೆ ಸರ್ಕಾರ ಪರಿಶೀಲಿಸಿರುತ್ತದೆ.

ರಾಜ್ಯದ ಗಾಮ ಪಂಚಾಯತಿ ಸದಸ್ಯರುಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ.

ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:118:ಜಿಪಸ:09, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಪ್ರತಿ ಸದಸ್ಯನಿಗೆ ಮಾಸಿಕ ರೂ. 250/– ರಂತೆ (ಎರಡು ನೂರ ಐವತ್ತು ರೂಪಾಯಿಗಳು ಮಾತ್ರ) ರಾಜ್ಯದ ಒಟ್ಟು 5628 ಗ್ರಾಮ ಪಂಚಾಯತಿಗಳಲ್ಲಿನ ಒಟ್ಟು 91,402 ಸದಸ್ಯರುಗಳಿಗೆ 2009–10ನೇ ಸಾಲಿನಲ್ಲಿ ರೂ.27.45 ಕೋಟಿ (ಇಪ್ಪತ್ತೇಳು ಕೋಟಿ ನಲವತ್ತೈದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 2515–00–198–1–07– (ಯೋಜನೆ) ಒದಗಿಸಿರುವ ಶಾಸನ ಬದ್ದ ಅನುದಾನದ ಮೊತ್ತದಿಂದ ಬಿಡುಗಡೆ ಮಾಡಿ, ಪೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗ ಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಈ ಆದೇಶದೊಂದಿಗೆ ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂ: ಆಇ:55: ವೆಚ್ಚ–6:2009 ದಿ: 18–06–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸ್ವರ್ಣಲತ. ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಂ.ರಾಜ್)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾ ಜ್ ಇಲಾಖೆ.

**ಸರ್ಕಾರಿ ಆದೇಶ ಸಂ:ಗ್ರಾಅಪ:118:ಜಿಪಸ:09 ದಿ:17–7–2009ರ**

**ಅನುಬಂಧ**

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಗ್ರಾಮ ಪಂಚಾಯತ್ ಸಂಖ್ಯೆ | ಒಟ್ಟು ಗ್ರಾ.ಪಂ.ಸದಸ್ಯರ ಸಂಖ್ಯೆ | ಪ್ರತಿ ಸದಸ್ಯರಿಗೆ ಮಾಸಿಕ ರೂ. 250/– ರಂತೆ ದಿ: 1–4–2009 ರಿಂದ 31–3–2010 ರ ವರೆಗೆ ಲಭ್ಯವಾಗುವ ಗೌರವಧನ ರೂ. ಗಳಲ್ಲಿ |
|---|---|---|---|---|
| 1. | ಬಾಗಲಕೋಟೆ | 163 | 2961 | 8883000.00 |
| 2. | ಬೆಂಗಳೂರು (ನ) | 86 | 2426 | 7278000.00 |
| 3. | ಬೆಂಗಳೂರು(ಗ್ರಾ) | 98 | 1644 | 4932000.00 |
| 4. | ಬೆಳಗಾಂ | 485 | 8475 | 25425000.00 |
| 5. | ಬಳ್ಳಾರಿ | 189 | 3405 | 10215000.00 |
| 6. | ಬೀದರ್ | 175 | 2972 | 8916000.00 |
| 7. | ಬಿಜಾಪುರ | 199 | 3626 | 10878000.00 |
| 8. | ಚಾಮರಾಜನಗರ | 120 | 2061 | 6183000.00 |
| 9. | ಚಿಕ್ಕಮಗಳೂರು | 226 | 2405 | 7215000.00 |
| 10 | ಚಿತ್ರದುರ್ಗ | 185 | 3223 | 9669000.00 |
| 11 | ದಕ್ಷಿಣ ಕನ್ನಡ | 203 | 3275 | 9825000.00 |
| 12 | ದಾವಣಗೆರೆ | 230 | 3267 | 9801000.00 |
| 13 | ಧಾರವಾಡ | 127 | 1863 | 5589000.00 |
| 14 | ಗದಗ | 106 | 1624 | 4872000.00 |
| 15 | ಗುಲ್ಬರ್ಗಾ | 337 | 5926 | 17778000.00 |
| 16 | ಹಾಸನ | 258 | 3711 | 11133000.00 |
| 17 | ಹಾವೇರಿ | 208 | 2963 | 8889000.00 |
| 18 | ಕೊಡಗು | 98 | 1250 | 3750000.00 |
| 19 | ಕೋಲಾರ | 156 | 2543 | 7629000.00 |
| 20 | ಕೊಪ್ಪಳ | 134 | 2604 | 7812000.00 |
| 21 | ಮಂಡ್ಯ | 232 | 3835 | 11505000.00 |
| 22 | ಮೈಸೂರು | 235 | 4300 | 12900000.00 |
| 23 | ರಾಯಚೂರು | 164 | 3276 | 9828000.00 |
| 24 | ಶಿವಮೊಗ್ಗ | 260 | 2804 | 8412000.00 |
| 25 | ತುಮಕೂರು | 321 | 5362 | 16086000.00 |
| 26 | ಉಡುಪಿ | 146 | 2398 | 7194000.00 |
| 27 | ಉತ್ತರ ಕನ್ನಡ | 206 | 2622 | 7866000.00 |
| 28 | ರಾಮನಗರ | 130 | 2101 | 6303000.00 |
| 29 | ಚಿಕ್ಕಬಳ್ಳಾಪುರ | 151 | 2359 | 7077000.00 |
| | **ಒಟ್ಟು** | **5628** | **91281** | **273843000.00** |

**ಸ್ವರ್ಣಲತ. ಎಂ. ಭಂಡಾರೆ**

ಪಿ.ಆರ್. 1763

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಂ.ರಾಜ್)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾ ಜ್ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ರಾಜ್ಯಮಟ್ಟದ ಹುಲಿ ಸಂರಕ್ಷಣಾ ಚಾಲನಾ ಸಮಿತಿ (Constitution of Steering Committee) ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಇವರ ಪತ್ರ ಸಂಖ್ಯೆ:ಬಿ/ಸಿಆರ್–61/2006–07, ದಿನಾಂಕ: 25/05/2009

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರು ವನ್ಯಜೀವಿ ಸಂರಕ್ಷಣಾ ಕಾಯ್ದೆ 1972 ರ ಸೆಕ್ಷನ್ 38(U) ಅನ್ವಯ ರಾಜ್ಯದಲ್ಲಿ ಹುಲಿ ಸಂರಕ್ಷಣೆ ದೃಷ್ಟಿಯಿಂದ ರಾಜ್ಯ ಮಟ್ಟದ ಹುಲಿ ಸಂರಕ್ಷಣಾ ಚಾಲನಾ ಸಮಿತಿ (Constitution of Steering Committee) ಯನ್ನು ಈ ಕೆಳಗಿನಂತೆ ರಚಿಸಲು ಕೋರಿರುತ್ತಾರೆ.

| | | | |
|---|---|---|---|
| 1. | ಸನ್ಮಾನ್ಯ ಮುಖ್ಯ ಮಂತ್ರಿಗಳು | : | ಅಧ್ಯಕ್ಷರು |
| 2. | **ಅಧ್ಯಕ್ಷರು,**<br>ಪಶ್ಚಿಮ ಘಟ್ಟ ಕಾರ್ಯಪಡೆ | : | ಉಪಾಧ್ಯಕ್ಷರು |
| 3. | **ಅಧಿಕಾರಿ ಸದಸ್ಯರು:** | | |
| | ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | : | ಸದಸ್ಯರು |
| | ಆ) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು. | : | ಸದಸ್ಯರು |
| | ಇ) ನಿರ್ದೇಶಕರು,<br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ. | : | ಸದಸ್ಯರು |
| | ಈ) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,<br>ದಾಂಡೇಲಿ ವನ್ಯಜೀವಿ ವಿಭಾಗ, ದಾಂಡೇಲಿ | : | ಸದಸ್ಯರು |
| 4. | **ತಜ್ಞರು:** | | |
| | ಅ) ಡಾ: ಉಲ್ಲಾಸ್ ಕಾರಂತ್,<br>ವನ್ಯಜೀವಿ ತಜ್ಞರು, | : | ಸದಸ್ಯರು |
| | ಆ) ಡಾ: ಸುಕುಮಾರ್,<br>Centre for Ecological Sciences-Indian Institute of Science, ಬೆಂಗಳೂರು. | : | ಸದಸ್ಯರು |
| | ಇ) ಡಾ: ಆರ್. ಬಾಲಸುಬ್ರಮಣ್ಯಂ,<br>ವಿವೇಕಾನಂದ ಯೂತ್ ಮೂವ್‌ಮೆಂಟ್ ಸರಗೂರು,<br>ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ | : | ಸದಸ್ಯರು |
| 5. | **ರಾಜ್ಯ ಗಿರಿಜನ ಸಲಹಾ ಪರಿಷತ್ತಿನ ಇಬ್ಬರು ಸದಸ್ಯರು:** | | |
| | ಅ) ಶ್ರೀ ಅಪ್ಪಚ್ಚು ರಂಜನ್, ಶಾಸಕರು, ಮಡಿಕೇರಿ | : | ಸದಸ್ಯರು |
| | ಆ) ಶ್ರೀ ಕೃಷ್ಣಮೂರ್ತಿ, ರಾಜ್ಯ ಕಾರ್ಯದರ್ಶಿಗಳು,<br>ವನವಾಸಿ ಕಲ್ಯಾಣ, ಅಂಬಿಕಾನಗರ, ಉ.ಕ | : | ಸದಸ್ಯರು |
| 6. | **ರಾಜ್ಯ ಸರ್ಕಾರದ ಇಲಾಖೆಯ ಪ್ರತಿನಿಧಿಗಳು:** | | |
| | ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. | : | ಸದಸ್ಯರು |
| | ಆ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಸಮಾಜ ಕಲ್ಯಾಣ ಇಲಾಖೆ. | : | ಸದಸ್ಯರು |
| 7. | The Chief Wildlife Warden, Karnataka, Bangalore. | : | ಸದಸ್ಯ ಕಾರ್ಯದರ್ಶಿ |

ಆದುದರಿಂದ ಈ ಕೆಳಗಿನಂತೆ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 293 ಎಫ್‌ಡಬ್ಲ್ಯುಎಲ್ 2006, ಬೆಂಗಳೂರು. ದಿನಾಂಕ: 16ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವನ್ಯಜೀವಿ ಸಂರಕ್ಷಣಾ ಕಾಯ್ದೆ 1972 ರ ಸೆಕ್ಷನ್ 38(U) ಅನ್ವಯ ರಾಜ್ಯದಲ್ಲಿ ಹುಲಿ ಸಂರಕ್ಷಣೆ ದೃಷ್ಟಿಯಿಂದ ರಾಜ್ಯಮಟ್ಟದ ಹುಲಿ ಸಂರಕ್ಷಣಾ ಚಾಲನಾ ಸಮಿತಿ (Constitution of Steering Committee) ಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

| | | | |
|---|---|---|---|
| 1. | ಸನ್ಮಾನ್ಯ ಮುಖ್ಯ ಮಂತ್ರಿಗಳು | : | ಅಧ್ಯಕ್ಷರು |
| 2. | **ಅಧ್ಯಕ್ಷರು,**<br>ಪಶ್ಚಿಮ ಘಟ್ಟ ಕಾರ್ಯಪಡೆ | : | ಉಪಾಧ್ಯಕ್ಷರು |
| 3. | **ಅಧಿಕಾರಿ ಸದಸ್ಯರು:**<br>ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.<br>ಆ) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು.<br>ಇ) ನಿರ್ದೇಶಕರು,<br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.<br>ಈ) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,<br>ದಾಂಡೇಲಿ ವನ್ಯಜೀವಿ ವಿಭಾಗ, ದಾಂಡೇಲಿ | :<br>:<br>:<br>: | ಸದಸ್ಯರು<br>ಸದಸ್ಯರು<br>ಸದಸ್ಯರು<br>ಸದಸ್ಯರು |
| 4. | **ತಜ್ಞರು:**<br>ಅ) ಡಾ: ಉಲ್ಲಾಸ್ ಕಾರಂತ್,<br>ವನ್ಯಜೀವಿ ತಜ್ಞರು,<br>ಆ) ಡಾ: ಸುಕುಮಾರ್,<br>Centre for Ecological Sciences-Indian Institute of Science, ಬೆಂಗಳೂರು.<br>ಇ) ಡಾ: ಆರ್. ಬಾಲಸುಬ್ರಮಣ್ಯಂ,<br>ವಿವೇಕಾನಂದ ಯೂತ್ ಮೂವ್‌ಮೆಂಟ್ ಸರಗೂರು,<br>ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ | :<br>:<br>: | ಸದಸ್ಯರು<br>ಸದಸ್ಯರು<br>ಸದಸ್ಯರು |
| 5. | **ರಾಜ್ಯ ಗಿರಿಜನ ಸಲಹಾ ಪರಿಷತ್ತಿನ ಇಬ್ಬರು ಸದಸ್ಯರು:**<br>ಅ) ಶ್ರೀ ಅಪ್ಪಚ್ಚು ರಂಜನ್, ಶಾಸಕರು, ಮಡಿಕೇರಿ<br>ಆ) ಶ್ರೀ ಕೃಷ್ಣಮೂರ್ತಿ, ರಾಜ್ಯ ಕಾರ್ಯದರ್ಶಿಗಳು,<br>ವನವಾಸಿ ಕಲ್ಯಾಣ, ಅಂಬಿಕಾನಗರ, ಉ.ಕ | :<br>: | ಸದಸ್ಯರು<br>ಸದಸ್ಯರು |
| 6. | **ರಾಜ್ಯ ಸರ್ಕಾರದ ಇಲಾಖೆಯ ಪ್ರತಿನಿಧಿಗಳು:**<br>ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.<br>ಆ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಸಮಾಜ ಕಲ್ಯಾಣ ಇಲಾಖೆ. | :<br>: | ಸದಸ್ಯರು<br>ಸದಸ್ಯರು |
| 7. | The Chief Wildlife Warden, Karnataka, Bangalore. | : | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಆರ್. ಕಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1792

## ಶಿಕ್ಷಣ ಸಚಿವಾಲಯ

**ವಿಷಯ:** 2009–10ನೇ ಸಾಲಿನ ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಡಿ 100 ಯೋಯೋಕ 2008, ದಿನಾಂಕ: 16–07–2008.
2. ಆಯುಕ್ತರು, ಪದವಿಪೂರ್ವ ಶಿಕ್ಷಣರವರ ಪತ್ರ ಸಂಖ್ಯೆ: ಪಪೂಶಿಇ 01 ಸಿಬ್ಬಂದಿ 2 ಇತರೆ ಸಿಸಿ 2008, ದಿನಾಂಕ: 1/15–04–2009.

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು 2008–09ನೇ ಸಾಲಿನ ಅಂದರೆ ದಿನಾಂಕ: 01–04–2008 ರಿಂದ 31–03–2009ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿತ್ತು.
2. ಮೇಲೆ ಓದಲಾದ (2)ರ ಪತ್ರದಲ್ಲಿ, ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ

ಹುದ್ದೆಗಳನ್ನು 2009–10ನೇ ಸಾಲಿಗೆ ಅಂದರೆ ದಿನಾಂಕ 01–04–2009ರಿಂದ 31–03–2010ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿದ್ದಾರೆ.

3. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 93 ಯೋಯೋಕ 2008, ಬೆಂಗಳೂರು, ದಿನಾಂಕ: 27ನೇ ಜುಲೈ 2009**

**[ಸಂಖ್ಯೆ: ಇಡಿ 95 ಸ್ಕೀಮರ (ಯುನಿಕ್) 2009, ದಿನಾಂಕ: 27–07–2009]**

4. ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನು ಬಂಧದಲ್ಲಿ ನಮೂದಿಸಿರುವಂತೆ 2009–10ನೇ ಸಾಲಿಗೆ ದಿನಾಂಕ: 01–04–2009ರಿಂದ 31–03–2010ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಿದೆ. ಇದಕ್ಕೆ ತಗಲುವ ವೆಚ್ಚವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 10–07–1996, ಸಂಖ್ಯೆ: ಎಫ್.ಡಿ:1 :ಟಿಎಫ್.ಪಿ. 1996ರ ಆದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತ ವಾದ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 626 ಐಎಫ್ಎಸ್ 2009, ದಿನಾಂಕ: 26–05–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶದನ್ವಯ ಮತ್ತು ಅವರ ಹೆಸರಿನಲ್ಲಿ

**ಐ. ಎಫ್. ಮಾಗಿ**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ(ಯೋಜನೆ).

**ಸರ್ಕಾರದ ಆದೇಶ ಸಂಖ್ಯೆ: ಇಡಿ 93 ಯೋಯೋಕ 2009 ಬೆಂಗಳೂರು, ದಿನಾಂಕ 27–07–2009ಕ್ಕೆ ಅನುಬಂಧ**

| ಕ್ರ ಸಂ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ |
|---|---|---|---|
| 1. | ಪ್ರಾಚಾರ್ಯರು | 109 | ಇಎಇ 142 ಟಿಪಿಯು 72 ದಿಃ 6.2.72 |
| 2. | ಉಪನ್ಯಾಸಕರು | 1110 | |
| 3. | ಗ್ರಂಥಪಾಲಕರು | 89 | |
| 4. | ಪ್ರಥಮ ದರ್ಜೆ ಸಹಾಯಕರು | 89 | |
| 5. | ದ್ವಿತೀಯ ದರ್ಜೆ ಸಹಾಯಕರು | 109 | |
| 6. | ದ್ವಿದಸ ಸಹಿತ ಸಹಾಯಕರು | 109 | |
| 7. | ಪರಿಚಾರಕರು | 109 | |
| 8. | ಸೇವಕ | 109 | |
| 9. | ಪ್ರಾಚಾರ್ಯರು | 20 | ಇಡಿ 152 ಟಿಪಿಯು 73 ದಿಃ 17.8.73 |
| 10. | ಉಪನ್ಯಾಸಕರು | 200 | |
| 11. | ದ್ವಿತೀಯ ದರ್ಜೆ ಸಹಾಯಕರು | 20 | |
| 12. | ದ್ವಿದಸ ಸಹಿತ ಸಹಾಯಕರು | 20 | |
| 13. | ಪರಿಚಾರಕರು | 20 | |
| 14. | ಸೇವಕ | 20 | |
| 15. | ಪ್ರಾಚಾರ್ಯರು | 10 | ಇಡಿ 250 ಟಿಪಿಯು 73 ದಿಃ 3.1.75 |
| 16. | ಉಪನ್ಯಾಸಕರು | 80 | |
| 17. | ದ್ವಿತೀಯ ದರ್ಜೆ ಸಹಾಯಕರು | 10 | |
| 18. | ದ್ವಿದಸ ಸಹಿತ ಬೆರಳಚ್ಚುಗಾರರು | 10 | |
| 19. | ಪರಿಚಾರಕರು | 2 | |
| 20. | ಸೇವಕ | 10 | |
| 21. | ಪ್ರಾಚಾರ್ಯರು | 1 | ಇಡಿ 51 ಟಿಪಿಯು 76 ದಿಃ 30.6.76 |
| 22. | ಉಪನ್ಯಾಸಕರು | 12 | |
| 23. | ಪ್ರಾಚಾರ್ಯರು | 3 | ಇಡಿ 76 ಎಸ್ಒಹೆಚ್ 77 ದಿಃ 24.1.77 |

| ಕ್ರ ಸಂ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ |
|---|---|---|---|
| 24. | ಉಪನ್ಯಾಸಕರು | 18 | |
| 25. | ದ್ವಿತೀಯ ದರ್ಜೆ ಸಹಾಯಕರು | 3 | |
| 26. | ಪ್ರಾಚಾರ್ಯರು | 2 | ಇಡಿ 137 ಎಲ್ಎಂಎಸ್ 76 ದಿಃ 24.1.77 |
| 27. | ಉಪನ್ಯಾಸಕರು | 20 | |
| 28. | ದ್ವಿತೀಯ ದರ್ಜೆ ಸಹಾಯಕರು | 2 | |
| 29. | ದ್ವಿದಸ ಸಹಿತ ಬೆರಳಚ್ಚುಗಾರರು | 2 | |
| 30. | ಪರಿಚಾರಕ | 2 | |
| 31. | ಸೇವಕ | 2 | |
| 32. | ಪ್ರಾಚಾರ್ಯರು | 1 | ಇಡಿ 7 ಎಲ್ಎಂಎಸ್ 76 ದಿಃ 28.6.76 |
| 33. | ಉಪನ್ಯಾಸಕರು | 7 | |
| 34. | ದ್ವಿತೀಯ ದರ್ಜೆ ಸಹಾಯಕರು | 1 | |
| 35. | ದ್ವಿದಸ ಸಹಿತ ಬೆರಳಚ್ಚುಗಾರರು | 1 | |
| 36. | ಪ್ರಾಚಾರ್ಯರು | 1 | ಇಡಿ 39 ಎಸ್ಇಎಸ್ 79 ದಿಃ 15.8.76 |
| 37. | ಉಪನ್ಯಾಸಕರು | 7 | |
| 38. | ಪ್ರಥಮ ದರ್ಜೆ ಸಹಾಯಕರು | 1 | |
| 39. | ದ್ವಿತೀಯ ದರ್ಜೆ ಸಹಾಯಕರು | 1 | |
| 40. | ಸೇವಕ | 1 | |
| 41. | ಪ್ರಾಚಾರ್ಯರು | 7 | ಇಡಿ 108 ಎಸ್ಇಎಸ್ 79 ದಿಃ 22.8.79 |
| 42. | ಉಪನ್ಯಾಸಕರು | 46 | |
| 43. | ಗ್ರಂಥಪಾಲಕರು | 7 | |
| 44. | ಪ್ರಥಮ ದರ್ಜೆ ಸಹಾಯಕರು | 7 | |
| 45. | ಪರಿಚಾರಕ | 3 | |
| 46. | ಪ್ರಾಚಾರ್ಯರು | 1 | ಇಎಇ 36 ಎಸ್ಇಹೆಚ್ 79 ದಿಃ 30.8.79 |
| 47. | ಉಪನ್ಯಾಸಕರು | 6 | |
| 48. | ಗ್ರಂಥಪಾಲಕರು | 1 | |
| 49. | ಪ್ರಥಮ ದರ್ಜೆ ಸಹಾಯಕರು | 1 | |
| 50. | ಪ್ರಾಚಾರ್ಯರು | 1 | ಇಡಿ 149 ಹೆಚ್ಇಹೆಚ್ 79 ದಿಃ 4.10.79 |
| 51. | ಉಪನ್ಯಾಸಕರು | 6 | |
| 52. | ಗ್ರಂಥಪಾಲಕರು | 1 | |
| 53. | ಪ್ರಥಮ ದರ್ಜೆ ಸಹಾಯಕರು | 1 | |
| 54. | ಪ್ರಾಚಾರ್ಯರು | 7 | ಇಡಿ 59 ಎಂಹೆಚ್ಎಸ್ 79 ದಿಃ 1.7.80 |
| 55. | ಉಪನ್ಯಾಸಕರು | 48 | |
| 56. | ದ್ವಿತೀಯ ದರ್ಜೆ ಸಹಾಯಕರು | 7 | |
| 57. | ದ್ವಿದಸ ಸಹಿತ ಬೆರಳಚ್ಚುಗಾರರು | 7 | |
| 58. | ಸೇವಕ | 2 | |
| 59. | ಪ್ರಾಚಾರ್ಯರು | 2 | ಇಎಇ 59 ಎಂಹೆಚ್ಎಸ್ 80 ದಿಃ1.7.80 |
| 60. | ಉಪನ್ಯಾಸಕರು | 16 | |
| 61. | ದ್ವಿತೀಯ ದರ್ಜೆ ಸಹಾಯಕರು | 2 | |
| 62. | ದ್ವಿದಸ ಸಹಿತ ಬೆರಳಚ್ಚುಗಾರರು | 2 | |

| ಕ್ರ ಸಂ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ |
|---|---|---|---|
| 63. | ಸೇವಕ | 2 | |
| 64. | ಪ್ರಾಚಾರ್ಯರು | 30 | ಇಡಿ 82 ಎಂಯುಎಸ್ 80 ದಿಃ 3.7.81 |
| 65. | ಉಪನ್ಯಸಕರು | 180 | |
| 66. | ದ್ವಿದಸ ಸಹಿತ ಬೆರಳಚ್ಚುಗಾರರು | 30 | |
| 67. | ಸೇವಕ | 30 | |
| 68. | ಪ್ರಾಚಾರ್ಯರು | 2 | ಇಡಿ 82 ಎಂಯುಎಸ್ 80 ದಿಃ 3.7.81 |
| 69. | ಉಪನ್ಯಾಸಕರು | 12 | |
| 70. | ದ್ವಿತೀಯ ದರ್ಜೆ ಸಹಾಯಕರು | 2 | |
| 71. | ಸೇವಕ | 2 | |
| 72. | ಪ್ರಾಚಾರ್ಯರು | 31 | ಇಡಿ 76 ಎಂಯುಎಸ್ 80 ದಿಃ 5.7.82 |
| 73. | ಉಪನ್ಯಾಸಕರು | 186 | |
| 74. | ದ್ವಿತೀಯ ದರ್ಜೆ ಸಹಾಯಕರು | 31 | |
| 75. | ಸೇವಕ | 31 | |
| 76. | ಪ್ರಾಚಾರ್ಯರು | 8 | ಇಡಿ 76 ಎಂಯುಎಸ್ 82 ದಿಃ 5.7.82 |
| 77. | ಉಪನ್ಯಾಸಕರು | 42 | |
| 78. | ದ್ವಿತೀಯ ದರ್ಜೆ ಸಹಾಯಕರು | 8 | |
| 79. | ಸೇವಕ | 8 | |
| 80. | ಪ್ರಾಚಾರ್ಯರು | 1 | ಇಡಿ 76 ಎಂಯುಎಸ್ 82 ದಿಃ 5.7.82 |
| 81. | ಉಪನ್ಯಾಸಕರು | 6 | |
| 82. | ದ್ವಿತೀಯ ದರ್ಜೆ ಸಹಾಯಕರು | 1 | |
| 83. | ಸೇವಕ | 1 | |
| 84. | ಪ್ರಾಚಾರ್ಯರು | 36 | ಇಡಿ 67 ಎಂಯುಎಸ್ 83 ದಿಃ 2.7.83 |
| 85. | ಉಪನ್ಯಾಸಕರು | 224 | |
| 86. | ದ್ವಿತೀಯ ದರ್ಜೆ ಸಹಾಯಕರು | 36 | |
| 87. | ಸೇವಕ | 36 | |
| 88. | ಪ್ರಾಚಾರ್ಯರು | 1 | ಇಡಿ 67 ಎಂಯುಎಸ್ 83 ದಿಃ 2.7.83 |
| 89. | ಉಪನ್ಯಾಸಕರು | 6 | |
| 90. | ದ್ವಿತೀಯ ದರ್ಜೆ ಸಹಾಯಕರು | 1 | |
| 91. | ಸೇವಕ | 1 | |
| 92. | ಪ್ರಾಚಾರ್ಯರು | 9 | ಇಡಿ 67 ಎಂಯುಎಸ್ 83 ದಿಃ 2.7.83 |
| 93. | ಉಪನ್ಯಾಸಕರು | 54 | |
| 94. | ದ್ವಿತೀಯ ದರ್ಜೆ ಸಹಾಯಕರು | 9 | |
| 95. | ಸೇವಕ | 9 | |
| 96. | ಪ್ರಾಚಾರ್ಯರು | 61 | ಇಡಿ 74 ಎಂಯುಎಸ್ 84 ದಿಃ 9.7.84 |
| 97. | ಉಪನ್ಯಾಸಕರು | 427 | |
| 98. | ದ್ವಿತೀಯ ದರ್ಜೆ ಸಹಾಯಕರು | 61 | |
| 99. | ಸೇವಕ | 61 | |
| 100. | ಪ್ರಾಚಾರ್ಯರು | 5 | ಇಡಿ 74 ಎಂಯುಎಸ್ 84 ದಿಃ 9.7.84 |
| 101. | ಉಪನ್ಯಾಸಕರು | 35 | |

| ಕ್ರ ಸಂ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ |
|---|---|---|---|
| 102. | ಪ್ರಥಮ ದರ್ಜೆ ಸಹಾಯಕರು | 5 | |
| 103. | ಸೇವಕ | 5 | |
| 104. | ಪ್ರಾಚಾರ್ಯರು | 4 | ಇಡಿ 74 ಎಂಯುಎಸ್ 84 ದಿಃ 9.7.84 |
| 105. | ಉಪನ್ಯಾಸಕರು | 28 | |
| 106. | ಪ್ರಥಮ ದರ್ಜೆ ಸಹಾಯಕರು | 4 | |
| 107. | ಸೇವಕ | 4 | |
| 108. | ಪ್ರಾಚಾರ್ಯರು | 2 | ಇಡಿ 74 ಎಂಯುಎಸ್ 84 ದಿಃ 9.7.84 |
| 109. | ಉಪನ್ಯಾಸಕರು | 14 | |
| 110. | ಪ್ರಥಮ ದರ್ಜೆ ಸಹಾಯಕರು | 2 | |
| 111. | ಸೇವಕ | 2 | |
| 112. | ಪ್ರಾಚಾರ್ಯರು | 3 | ಇಡಿ 74 ಎಂಯುಎಸ್ 84 ದಿಃ 9.7.84 |
| 113. | ಉಪನ್ಯಾಸಕರು | 21 | |
| 114. | ಪ್ರಥಮ ದರ್ಜೆ ಸಹಾಯಕರು | 3 | |
| 115. | ಸೇವಕ | 3 | |
| 116. | ಪ್ರಾಚಾರ್ಯರು | 2 | ಇಡಿ 74 ಎಂಯುಎಸ್ 84 ದಿಃ 9.7.84 |
| 117. | ಉಪನ್ಯಾಸಕರು | 14 | |
| 118. | ಪ್ರಥಮ ದರ್ಜೆ ಸಹಾಯಕರು | 2 | |
| 119. | ಸೇವಕ | 2 | |
| 120. | ಪ್ರಾಚಾರ್ಯರು | 1 | ಇಡಿ 74 ಎಂಯುಎಸ್ 84 ದಿಃ 9.7.84 |
| 121. | ಉಪನ್ಯಾಸಕರು | 7 | |
| 122. | ಪ್ರಥಮ ದರ್ಜೆ ಸಹಾಯಕರು | 1 | |
| 123. | ಸೇವಕ | 1 | |
| 124. | ಉಪನ್ಯಾಸಕರು | 300 | ಇಡಿ 74 ಎಂಯುಎಸ್ 84 ದಿಃ 9.7.84 |
| 125. | ಉಪನ್ಯಾಸಕರು | 100 | ಇಡಿ 74 ಎಂಯುಎಸ್ 84 ದಿಃ 9.7.84 |

**ಐ.ಎಫ್. ಮಾಗಿ**

ಪಿ.ಆರ್. 1819

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ.ಕೆ.ಎಸ್.ಶಂಕರ್ ನಾಯಕ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಹಾಗೂ ಶ್ರೀ ಆರ್.ಬಸಣ್ಣ, ಕಿರಿಯ ಪುರುಷ ಆರೋಗ್ಯ ಸಹಾಯಕ (ನಿವೃತ್ತ) ಇವರುಗಳ ವಿರುದ್ದದ ಶಿಸ್ತು ಪ್ರಕರಣಕ್ಕೆ ಸಂಬಂಧಿಸಿದಂತೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಆಕುಕ 69 ಎಂಎಸ್ಎ 2000, ದಿ:09/07/2004.

2) ಸರ್ಕಾರಿ ಆದೇಶ ಸಂಖ್ಯೆ:ಆಕುಕ 376 ಎಂಎಸ್ಎ 2004, ದಿ:12/04/2005.

3) ಸರ್ಕಾರಿ ಆದೇಶ ಸಂಖ್ಯೆ:ಆಕುಕ 376 ಎಂಎಸ್ಎ 2004, ದಿ:28/07/2005.

4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ:6/03/2008.

5) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 376 ಎಂಎಸ್ಎ 2004, ದಿ:9/04/2008.

6) ಡಾ. ಶಂಕರ್ ನಾಯಕ್ ಇವರ ಲಿಖಿತ ಹೇಳಿಕೆ ದಿ:9/4/2008.

7) ಸುತ್ತೋಲೆ ಸಂಖ್ಯೆ: ಡಿಪಿಎಆರ್ 9 ಸೇಇವಿ 95, ದಿ:26/06/1996.

8) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 46 ಸಿಎನ್ಎಸ್ 08, ದಿ:31–10–2008.

9) ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 112 ಎಂಎಸ್ಎ 97, ದಿ:05/08/1998.

10) ಡಾ. ಕೆ.ಎಸ್. ಶಂಕರ್ ನಾಯಕ್ ರವರ ಲಿಖಿತ ಹೇಳಿಕೆ ದಿ:15/11/1998.
11) ಶ್ರೀ ಆರ್. ಬಸಣ್ಣ ಇವರ ಲಿಖಿತ ಹೇಳಿಕೆ ದಿ:3/2/2000.
12) ಸರ್ಕಾರಿ ಆದೇಶ ಸಂಖ್ಯೆ: ಆಕುಕ 112 ಎಂಎಸ್ಎ 97, ದಿ:17/10/2002.
13) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ:8/4/2008.
14) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 112 ಎಂಎಸ್ಎ 97, ದಿ:23/04/2008.
15) ಡಾ.ಶಂಕರ್ ನಾಯಕ್ ರವರ ರಕ್ಷಣಾ ಹೇಳಿಕೆ ದಿ:23/04/2008.
16) ಶ್ರೀ ಆರ್.ಬಸಣ್ಣ ರವರ ರಕ್ಷಣಾ ಹೇಳಿಕೆ ದಿ:10/06/2008.
17) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 132 ಸಿಎನ್‌ಎಸ್ 2008 ದಿ:16/06/2009.

**ಪ್ರಸ್ತಾವನೆ:**

ಡಾ. ಕೆ.ಎಸ್. ಶಂಕರ್ ನಾಯಕ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು ಇವರು ಈ ಹಿಂದೆ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಚೆನ್ನಗಿರಿ, ದಾವಣಗೆರೆ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಡಾ. ನಾಗರಾಜು, ಸ್ನಾತ್ತಕೋತ್ತರ ವಿದ್ಯಾರ್ಥಿ, ಜೆ.ಜೆ.ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ ಇವರು ಉನ್ನತ ವ್ಯಾಸಂಗ ಮಾಡುತ್ತಿದ್ದರೂ ಸಹ ಅವರು ರಾಜ್ಯ ಕುಟುಂಬ ನಿಯಂತ್ರಣ ಘಟಕ, ಹರಿಹರ ಇಲ್ಲಿ ವೈದ್ಯಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆಂದು ಸುಳ್ಳು ದಾಖಲೆ ಸೃಷ್ಟಿಸಿ, ಎಲ್ಐ.ಸಿ. ಸಾಲಕ್ಕೆ ಡಾ. ನಾಗರಾಜು ರವರು ಜಾಮೀನುದಾರರೆಂದು ಸುಳ್ಳು ಸಹಿ ಮಾಡಿ ಮತ್ತು ಅವರ ಹೆಸರಿನ ಮೊಹರನ್ನು ಫೋರ್ಜರಿ ಮಾಡಿ ಅದನ್ನು ತಮ್ಮ ಸಹೋದ್ಯೋಗಿ ಡಾ. ಡಿ.ಎಸ್.ಚಂದ್ರಶೇಖರಪ್ಪ ಎಂಬುವವರಿಂದ ದೃಢೀಕರಿಸಿ, ಎಲ್ಐಸಿ ಹೌಸಿಂಗ್ ಫೈನ್ಯಾನ್ಸ್ ಲಿ. ತಾಜ್ ಟವರ್, ಬಲ್ಮಠ ರಸ್ತೆ, ಮಂಗಳೂರು ರವರಿಂದ ರೂ.3,75,000/– ಗಳ ಮೊತ್ತವನ್ನು ದಿ:6/1/98 ರಂದು ಸಾಲ ಪಡೆದಿರುವ ಆರೋಪವು ಹಾಗೂ ಸದರಿ ಸಾಲವನ್ನು ಪಾವತಿಸದೆ ಇರದ ಕಾರಣ ಸದರಿ ಎಲ್ಐಸಿ ಸಂಸ್ಥೆಯ ಫಿರ್ಯಾದಿನಂತೆ ಪೋಲೀಸರು ಸದರಿ ವೈದ್ಯಾಧಿಕಾರಿಯನ್ನು ದಿ:10/8/1999 ರಂದು ದಾವಣಗೆರೆಯಲ್ಲಿ ದಸ್ತಗಿರಿ ಮಾಡಿ, ದಿ:11/8/99 ರಂದು ಮಂಗಳೂರು ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ನಂತರ ಅಧಿಕಾರಿಯವರು ನ್ಯಾಯಾಲಯದಿಂದ ಜಾಮೀನು ಪಡೆದಿರುತ್ತಾರೆ. ಈ ಘಟನೆಗಳ ಬಗ್ಗೆ ವಿವರಗಳನ್ನು ಸರ್ಕಾರಕ್ಕೆ ವರದಿ ಮಾಡದೇ ಇರುವ ಆರೋಪಕ್ಕೆ ಸಂಬಂಧಿಸಿದಂತೆ, ಇಲಾಖಾ ವಿಚಾರಣೆ ನಡೆಸಿ, ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪ ಸಾಬೀತಾಗಿದ್ದ ಕಾರಣ ಮೇಲೆ(1)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿಗಳು 1957ರ ನಿಯಮ 8(viii)ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿತ್ತು.

ಈ ಆದೇಶದಿಂದ ಬಾಧಿತರಾದ ಡಾ.ಕೆ.ಎಸ್. ಶಂಕರ್‌ನಾಯಕ್ ಇವರು ಘನತೆವೆತ್ತ ರಾಜ್ಯಪಾಲರಿಗೆ ದಿ:29/8/2004 ರಂದು ಮೇಲ್ಮನವಿಯನ್ನು ಸಲ್ಲಿಸಿದ್ದು, ಮಾನ್ಯ ಘನತೆವೆತ್ತ ರಾಜ್ಯಪಾಲರು ಇವರ ಮೇಲ್ಮನವಿಯನ್ನು ಪುರಸ್ಕರಿಸಿ, ಈ ಪ್ರಕರಣದಲ್ಲಿ ಸಾಕ್ಷಿದಾರರುಗಳ ಹೇಳಿಕೆ ಮತ್ತು ಪಾಟೀ ಸವಾಲಿನ ಹಂತದಿಂದ ಮರು ವಿಚಾರಣೆ ನಡೆಸುವಂತೆ ಆದೇಶಿಸಿದ ಮೇರೆಗೆ ಈ ಸಂಬಂಧ ಸಾಕ್ಷಿದಾರರ ಹೇಳಿಕೆ ಮತ್ತು ಪಾಟೀ ಸವಾಲಿನ ಹಂತದಿಂದ ವಿಚಾರಣೆ ನಡೆಸಲು ತೀರ್ಮಾನಿಸಿ, ಮುಖ್ಯ ಜಾಗೃತಾಧಿಕಾರಿ, ಜಾಗೃತ ಕೋಶ, ಆರೋಗ್ಯ ಮತ್ತು ಕು.ಕ ಇಲಾಖೆ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿ, ವಿಚಾರಣಾ ವರದಿಯನ್ನು 30 ದಿನಗಳ ಒಳಗೆ ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ(2)ರಲ್ಲಿ ಓದಲಾದ ಆದೇಶದಲ್ಲಿ ನಿರ್ದೇಶನ ನೀಡಲಾಗಿತ್ತು ಹಾಗೂ ಸದರಿ ವೈದ್ಯಾಧಿಕಾರಿಯವರನ್ನು ಅವರ ವಿರುದ್ಧ ಬಾಕಿ ಇರುವ ಇಲಾಖಾ ವಿಚಾರಣೆಯಲ್ಲಿ ಆಗುವ ಅಂತಿಮ ತೀರ್ಮಾನಕ್ಕೆ ಒಳಪಟ್ಟು ಮೇಲೆ(3)ರಲ್ಲಿ ಓದಲಾದ ಸರ್ಕಾರಿ ಆದೇಶ ದಿ:28/7/2005 ರಲ್ಲಿ ಸರ್ಕಾರಿ ಸೇವೆಗೆ ಪುನರ್ ನೇಮಿಸಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು ಇಲ್ಲಿ ನೇಮಿಸಲಾಗಿತ್ತು.

ಈ ಸಂಬಂಧ ವಿಚಾರಣಾಧಿಕಾರಿಯವರು ನಿಯಮಾವಳಿಗಳ ಪ್ರಕಾರ ವಿಚಾರಣೆಯನ್ನು ನಡೆಸಿ, ಮೇಲೆ(4)ರಲ್ಲಿ ಓದಲಾದ ದಿ:6/3/2008ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ ಹಾಗೂ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆಂಬ ನಿರ್ಣಯಕ್ಕೆ ಬಂದಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, ವಿಚಾರಣಾ ವರದಿಯ ಪ್ರತಿಯೊಂದಿಗೆ (2)ನೇ ಕಾರಣ ಕೇಳುವ ನೋಟೀಸನ್ನು ಮೇಲೆ(5)ರಲ್ಲಿ ಓದಲಾದ ದಿ:9/4/2008ರ ಪತ್ರದಲ್ಲಿ ಆರೋಪಿತ ಅಧಿಕಾರಿಗೆ ಜಾರಿ ಮಾಡಿ ವಿಚಾರಣಾಧಿಕಾರಿಯವರ ನಿರ್ಣಯವನ್ನು ಏಕೆ ಒಪ್ಪಿಕೊಳ್ಳಬಾರದೆಂಬುದರ ಬಗ್ಗೆ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿತ್ತು. ಇದಕ್ಕೆ ಉತ್ತರವಾಗಿ ಆರೋಪಿತ ಅಧಿಕಾರಿಯು ಮೇಲೆ(6)ರಲ್ಲಿ ಓದಲಾದ ದಿ:9/4/2008ರ ಪತ್ರದಲ್ಲಿ ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯಲ್ಲಿ ತಾವು ಸರ್ಕಾರಕ್ಕೆ ಮೋಸ ಮಾಡಿರುವುದಿಲ್ಲವೆಂದು, ಹಾಗೆ ತಾವೇನಾದರೂ ತಪ್ಪು ಮಾಡಿದ್ದಲ್ಲಿ ಕ್ಷಮಿಸುವಂತೆ ಕೋರಿದ್ದಾರೆ.

ಸದರಿ ಅಧಿಕಾರಿಯವರ ವಿರುದ್ದ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಮುಖ್ಯ ನ್ಯಾಯಾಧೀಶರು(ಸೀನಿಯರ್ ಡಿವಿಜನ್) ಮತ್ತು ಚೀಫ್ ಅಡಿಷನಲ್ ಮ್ಯಾಜಿಸ್ಟ್ರೇಟ್, ಮಂಗಳೂರು ಇಲ್ಲಿ ದಾಖಲಾಗಿರುವ ಕ್ರಿಮಿನಲ್ ಪ್ರಕರಣದಲ್ಲಿ ನ್ಯಾಯಾಲಯವು ದಿ:26/09/2006 ರಂದು ಈ ಕೆಳಕಂಡಂತೆ ಆದೇಶಿಸಿರುತ್ತದೆ.

> Accused is sentenced to undergo Rigorous Imprisonment for 6 (six)months and also shall pay fine of Rs.5,000/-(Five thousand only) and in default he shall undergo Simple Imprisonment for 3(three) months for the offences punishable under Section 471 I.P.

ಮೇಲ್ಕಂಡ ತೀರ್ಪಿನ ವಿರುದ್ದ ಆಪಾದಿತರು ಮಂಗಳೂರು ಪ್ರಿನ್ಸಿಪಾಲ್ ಸೆಷನ್ ನ್ಯಾಯಾಲಯದಲ್ಲಿ ದಿನಾಂಕ:23/11/2006 ರಂದು ಮೇಲ್ಮನವಿ ಸಲ್ಲಿಸಿದ್ದು, ದಿ:26/09/2006 ರಂದು ಹೆಚ್ಚುವರಿ ಮುಖ್ಯ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜ್ಯುಡಿಷಿಯಲ್ ಚೀಫ್ ಮ್ಯಾಜಿಸ್ಟ್ರೇಟ್, ಮಂಗಳೂರು ನ್ಯಾಯಾಲಯದ ತೀರ್ಪಿಗೆ ತಡೆಯಾಜ್ಞೆ ನೀಡಿರುತ್ತದೆ.

ಮೇಲೆ(7)ರಲ್ಲಿ ಓದಲಾದ ಸುತ್ತೋಲೆ ಪ್ರಕಾರ ಕೆಳಮಟ್ಟದ ನ್ಯಾಯಾಲಯದಲ್ಲಿ ಆಪಾದಿತರನ್ನು ದಂಡನೆಗೆ ಗುರಿ ಮಾಡಿದಲ್ಲಿ ಇವರು ಮೇಲಿನ ನ್ಯಾಯಾಲಯದಿಂದ ತಡೆಹಾಜ್ಞೆ ತಂದರೂ ಸಹ ಇವರ ವಿರುದ್ದ ಕರ್ನಟಕ ನಾಗರೀಕ ಸೇವಾ (ಸಿಸಿಎ)ನಿಯಮಾವಳಿಗಳು 1957ರ ನಿಯಮ 14(1)ರ ಅನುಸಾರ ಹಾಗೂ ಭಾರತ ಸಂವಿಧಾನದ ಅನುಚ್ಚೇಧ 311(2)ರಡಿ ಮುಂದಿನ ಶಿಸ್ತಿನ ಕ್ರಮವನ್ನು ತಡೆಹಿಡಿಯಬೇಕಾಗಿಲ್ಲ ಮತ್ತು ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಬಹುದು ಎಂಬುದಾಗಿ ಸೂಚನೆಗಳು ಇರುತ್ತವೆ.

ಸರ್ಕಾರವು ವಿಚಾರಣಾ ವರದಿ, ಸಾಕ್ಷಿಗಳ ಹೇಳಿಕೆ ಸಂಬಂಧಪಟ್ಟ ದಾಖಾಲಾತಿಗಳನ್ನು ಹಾಗೂ ಆರೋಪಿತ ಅಧಿಕಾರಿಯು ನೀಡಿರುವ ಹೇಳಿಕೆಯನ್ನು ಪರಿಶೀಲಿಸಿದೆ. ಸದರಿ ವೈದ್ಯಾಧಿಕಾರಿಗಳು ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿದ್ದು, ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ಅಂದರೆ ಎಲ್.ಐ.ಸಿ. ಹೌಸಿಂಗ್ ಫೈನಾನ್ಸ್ ಕಂಪನಿಯಿಂದ ರೂ. 3,75,000/–ಗಳನ್ನು ಸಾಲವಾಗಿ ಪಡೆಯಲು ಜಾಮೀನುದಾರರ ಸಹಿಯನ್ನು ಹಾಗೂ ಮೊಹರನ್ನು ಫೋರ್ಜರಿ ಮಾಡಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿರುವ ಆರೋಪವು ಹಾಗೂ ಸದರಿ ಸಾಲವನ್ನು ಪಾವತಿಸದ ಕಾರಣ ಸದರಿ ಎಲ್.ಐ.ಸಿ. ಸಂಸ್ಥೆಯು ಇವರ ವಿರುದ್ದ ಕ್ರಿಮಿನಲ್ ಮೊಕದ್ದಮೆ ಹೂಡಿರುವ ಬಗ್ಗೆ ಹಾಗೂ ಇವರನ್ನು ದಿನಾಂಕ: 10/08/1999 ರಂದು ಪೋಲೀಸರು ದಾವಣಗೆರೆಯಲ್ಲಿ ದಸ್ತಗಿರಿ ಮಾಡಿ ದಿ: 11/8/1999 ರಂದು ಮಂಗಳೂರು ನ್ಯಾಯಾಲಯಕ್ಕೆ ಹಾಜರುಪಡಿಸಿರುವ ಬಗ್ಗೆ ಮೇಲಾಧಿಕಾರಿಗಳಿಗೆ / ಸರ್ಕಾರಕ್ಕೆ ತಿಳಿಸದೇ ಮರೆಮಾಚಿರುವುದು ಮತ್ತು ಇವರು ಈ ಸಂಬಂಧ ಘನ ನ್ಯಾಯಾಲಯದಲ್ಲಿ ತಮ್ಮ ತಪ್ಪನ್ನು ಒಪ್ಪಿಕೊಂಡಿದ್ದರ ಪರಿಣಾಮವಾಗಿ ನ್ಯಾಯಾಲಯವು ಇವರಿಗೆ ಕಠಿಣ ಸಜೆ ಮತ್ತು ದಂಡನೆ ವಿಧಿಸಿದ್ದರೂ ಸಹ ಸರ್ಕಾರಕ್ಕಾಗಲೀ/ಮೇಲಾಧಿಕಾರಿಗಳಿಗಾಗಲೀ ಈ ಮಾಹಿತಿ ನೀಡದಿರುವ ಆರೋಪಗಳು ವಿಚಾರಣಾ ಸಮಯದಲ್ಲಿ ಹಾಜರುಪಡಿಸಿದ್ದಂತಹ ದಾಖಲಾತಿ ಮತ್ತು ಸಾಕ್ಷಿಗಳ ಆಧಾರದ ಮೇಲೆ ದೃಢಪಟ್ಟಿರುತ್ತದೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ವಿಚಾರಣಾಧಿಕಾರಿಗಳು ನೀಡುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಡಾ. ಶಂಕರ್ ನಾಯಕ್ ರವರಿಗೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–8(viii)ರಡಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮನಿಸಿ ಈ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ(8)ರಲ್ಲಿ ಓದಲಾದ ಪತ್ರದಲ್ಲಿ ಪಡೆಯಲಾಗಿದೆ.

ಮತ್ತೊಂದು ಪ್ರಕರಣದಲ್ಲಿ ಡಾ. ಶಂಕರ್ ನಾಯಕ್ ಇವರು ವೈದ್ಯಾಧಿಕಾರಿಯಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಂಡಜ್ಜಿ, ಚಿತ್ರದುರ್ಗ ಜಿಲ್ಲೆ ಹಾಗೂ ಪ್ರಭಾರಿ ವೈದ್ಯಾಧಿಕಾರಿಯಾಗಿ ಸರ್ಕಾರಿ ಗ್ರಾಮೀಣ ಆರೋಗ್ಯ ಕೇಂದ್ರ, ಕೊಂಡಜ್ಜಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಆರ್. ಬಸಣ್ಣ, ಹಿಂದಿನ ಕಿರಿಯ ಪುರುಷ ಆರೋಗ್ಯ ಸಹಾಯಕ ಇವರೊಂದಿಗೆ ಶಾಮೀಲಾಗಿ ಈ ಕೆಳಕಂಡ ಆರೋಪಗಳನ್ನು ಎಸಗಿರುತ್ತಾರೆ.

(i) ಡಾ. ಶಂಕರ್ ನಾಯಕ್ ರವರು ಸಿಬ್ಬಂದಿ ವೇತನ ಬಾಬ್ತು ರೂ.45,091/– ಖಜಾನೆಯಿಂದ ಡ್ರಾ ಮಾಡಿ ಸಂಬಂಧಪಟ್ಟವರಿಗೆ ವಿತರಿಸದೆ ದುರುಪಯೋಗಪಡಿಸಿಕೊಂಡಿರುವುದು ಬೋಗಸ್ ಬಿಲ್ಲನ್ನು ತಯಾರಿಸಿ, ಅದನ್ನು ಅಕ್ವಿಟೆನ್ಸ್ ಪುಸ್ತಕದಲ್ಲಿ ದಾಖಲಾಗಿಸದೆ ರೂ.45,994/– ನ್ನು ಖಜಾನೆಯಿಂದ ಡ್ರಾ ಮಾಡಿ, ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು, ರೂ.4,000/– ಗಳನ್ನು ಖಜಾನೆಯಿಂದ ಡ್ರಾ ಮಾಡಿ, ನಗದು ಪುಸ್ತಕಕ್ಕೆ ತೆಗೆದುಕೊಳ್ಳದೆ ಸ್ವಂತಕ್ಕೆ ಬಳಸಿಕೊಂಡಿರುವುದು, ದಿ:1/2/1997 ರಿಂದ ದಿ:6/12/98ರವರೆಗಿನ ಒಟ್ಟು 36 ಬಿಲ್ಲುಗಳಿಂದ ರೂ.1,94,809/– ಗಳನ್ನು ಖಜಾನೆಯಿಂದ ಡ್ರಾ ಮಾಡಿ ಸ್ವಂತಕ್ಕೆ ಉಪಯೋಗಿಸಿಕೊಂಡಿರುವುದು,

ಶ್ರೀ ರಾಜ್ ಪುರೋಹಿತ, ಕಿರಿಯ ಪುರುಷ ಆರೋಗ್ಯ ಸಹಾಯಕ ಇವರ ಗೈರು ಹಾಜರಿಯನ್ನು ರಜೆ ಮಂಜೂರಾಗಿದೆ ಎಂದು ಸುಳ್ಳು ದಾಖಲೆ ಸೃಷ್ಟಿಸಿ ಈ ಅವಧಿಯ ವೇತನ ರೂ.28,960/–ಗಳನ್ನು ಹಾಗೂ ರೂ.12,181/–ಗಳನ್ನು ಡ್ರಾ ಮಾಡಿ ನೌಕರರಿಗೆ ವಿತರಿಸಿ, ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು, ಕಛೇರಿಗೆ ಸಂಬಂಧಿಸಿದ ದಾಖಲೆಗಳನ್ನು ಮನೆಯಲ್ಲಿ ಇಟ್ಟುಕೊಂಡಿರುವುದು, ಆರೋಗ್ಯ ಕೇಂದ್ರಕ್ಕೆ ಸಂಬಂಧಿಸಿದ ವಸ್ತುಗಳನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಂಡಿರುವುದು.

(ii) ಶ್ರೀ ಬಸಣ್ಣ, ನಿವೃತ್ತ ಕಿರಿಯ ಪುರುಷ ಆರೋಗ್ಯ ಸಹಾಯಕ ಇವರು ಮೇಲಿನ ಎಲ್ಲಾ ಮೊತ್ತಗಳಿಗೆ(ರೂ.1,94,809/–ನ್ನು ಹೊರತುಪಡಿಸಿ) ಸಂಬಂಧಿಸಿದಂತೆ, ಖೋಟಾ ಬಿಲ್ಲನ್ನು ತಯಾರಿಸಿ, ಖಜಾನೆಗೆ ಹಾಜರುಪಡಿಸಿ, ಹಣ ಡ್ರಾ ಮಾಡಿ, ಅದನ್ನು ಸಂಬಂಧಿಸಿದವರಿಗೆ ವಿತರಿಸದೆ ಡಾ. ಶಂಕರ್ ನಾಯಕ್ ರವರೊಂದಿಗೆ ಶಾಮೀಲಾಗಿ ಸರ್ಕಾರಕ್ಕೆ ವಂಚನೆ ಮಾಡಿ ದುರ್ನಡತೆ ಎಸಗಿರುವುದು.

ಮೇಲ್ಕಂಡ ಆರೋಪಗಳಿಗೆ ಸಂಬಂಧಿಸಿದಂತೆ, ಸದರಿ ಅಧಿಕಾರಿ/ನೌಕರರಿಗೆ ಮೇಲೆ (9) ರಲ್ಲಿ ಓದಲಾದ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಿ ಲಿಖಿತ ಹೇಳಿಕೆಗಳನ್ನು ಸಲ್ಲಿಸುವಂತೆ ನಿರ್ದೇಶನ ನೀಡಲಾಗಿತ್ತು. ಸದರಿ ನೋಟೀಸಿಗೆ ಸಂಬಂಧಿಸಿದಂತೆ ಡಾ.ಕೆ.ಎಸ್. ಶಂಕರ್‌ನಾಯಕ್ ಹಾಗೂ ಶ್ರೀ ಆರ್. ಬಸಣ್ಣರವರು ಮೇಲೆ (10) ಮತ್ತು (11) ರಲ್ಲಿ ಓದಲಾದ ಪತ್ರಗಳಲ್ಲಿ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಇವರುಗಳು ನೀಡಿರುವ ಹೇಳಿಕೆಗಳು ತೃಪ್ತಿಕರವಾಗಿಲ್ಲವಾದ ಕಾರಣ, ಸರ್ಕಾರವು ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಪ್ರಕರಣವನ್ನು ಜಂಟಿ ಇಲಾಖಾ ವಿಚಾರಣೆಗೆ ಗುರಿಪಡಿಸಲು ನಿರ್ಧರಿಸಿ, ವಿಚಾರಣಾಧಿಕಾರಿಗಳನ್ನು ಹಾಗೂ ಮಂಡನಾಧಿಕಾರಿಗಳನ್ನು ಮೇಲೆ (12) ರಲ್ಲಿ ಓದಲಾದ ಆದೇಶದಲ್ಲಿ ನೇಮಿಸಿ, ಈ ಸಂಬಂಧ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿತ್ತು.

ವಿಚಾರಣಾಧಿಕಾರಿಗಳು ನಿಯಮಾವಳಿಗಳ ಪ್ರಕಾರ ವಿಚಾರಣೆ ನಡೆಸಿ, ಮೇಲೆ (13) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆ ಎಂಬ ನಿರ್ಣಯವನ್ನು ನೀಡಿರುತ್ತಾರೆ. ಸರ್ಕಾರವು ಈ ವಿಚಾರಣಾ ವರದಿಯನ್ನು ಒಪ್ಪಿ, ಆರೋಪಿತ ಅಧಿಕಾರಿ/ನೌಕರರಿಗೆ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಏಕೆ ಅಂಗೀಕರಿಸಬಾರದು ಎಂಬುದರ ಬಗ್ಗೆ ರಕ್ಷಣಾ ಹೇಳಿಕೆಗಳು ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಮೇಲೆ (14) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯೊಂದಿಗೆ ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿತ್ತು.

ಸದರಿ ತಿಳುವಳಿಕೆ ಪತ್ರಕ್ಕೆ ಸಂಬಂಧಿಸಿದಂತೆ ಡಾ. ಶಂಕರ್ ನಾಯಕ್ ರವರು ಹಾಗೂ ಶ್ರೀ ಆರ್.ಬಸಣ್ಣ ರವರು ಅನುಕ್ರಮವಾಗಿ ದಿ:23–04–2008 ಹಾಗೂ ದಿ:25–04–2008 ರಲ್ಲಿ ತಮ್ಮ ರಕ್ಷಣಾ ಹೇಳಿಕೆಯನ್ನು ಮೇಲೆ (15) ಮತ್ತು (16) ರಲ್ಲಿ ಓದಲಾದ ಪತ್ರಗಳಲ್ಲಿ ಸಲ್ಲಿಸಿದ್ದಾರೆ. ಡಾ. ಶಂಕರ್ ನಾಯಕ್ ರವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ ಈ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನೀಡಿರುವ ವರದಿಯು ಸುಳ್ಳಿನಿಂದ ಕೂಡಿದ್ದು, ಆದ್ದರಿಂದ ಅದನ್ನು ತಿರಸ್ಕರಿಸಿ, ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ. ಶ್ರೀ ಆರ್.ಬಸಣ್ಣ ರವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ ಡಾ. ಶಂಕರ್ ನಾಯಕ್, ವೈದ್ಯಾಧಿಕಾರಿ ರವರು ತಮಗೆ ಬಿಲ್ಲನ್ನು ತಯಾರಿಸು ಎಂದು ಹೇಳಿ, ಬಿಲ್ಲನ್ನು ತಯಾರಿಸಿಕೊಂಡು ಅವರೇ ಖಜಾನೆಗೆ ತೆಗೆದುಕೊಂಡು ಹೋಗಿ ಹಣ ಪಡೆದು ಸದರಿ ಹಣ ಏನು ಮಾಡುತ್ತಿದ್ದರು ಎಂಬುದರ ಬಗ್ಗೆ ತಮಗೆ ತಿಳಿಯದು ಎಂದು ಇದರಲ್ಲಿ ತಮ್ಮ ತಪ್ಪು ಏನೂ ಇಲ್ಲವೆಂದು ಈ ಪ್ರಕರಣದಲ್ಲಿ ತಮ್ಮನ್ನು ಆರೋಪದಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಸರ್ಕಾರವು ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು, ಸಾಕ್ಷಿಗಳ ಹೇಳಿಕೆ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಆರೋಪಿತ ಅಧಿಕಾರಿ/ನೌಕರರು ಈ ಪ್ರಕರಣಗಳಲ್ಲಿ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದೆ.

ಡಾ. ಶಂಕರ್ ನಾಯಕ್ ರವರು ವಿಚಾರಣಾಧಿಕಾರಿಗಳು ನೀಡಲಾದ ವರದಿಯು ಸುಳ್ಳಿನಿಂದ ಕೂಡಿರುವುದು ಎಂದು ಹೇಳಿಕೆ ಸಲ್ಲಿಸಿದ್ದಾರೆ. ಈ ಸಂಬಂಧ ವಿಚಾರಣಾಧಿಕಾರಿಗಳ ವರದಿ, ಸಾಕ್ಷಿಗಳ ಹೇಳಿಕೆ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿದ್ದಲ್ಲಿ, ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಿಯಮಾವಳಿಗಳ ಪ್ರಕಾರ ವಿಚಾರಣೆ ಕೈಗೊಂಡಿರುವುದು ದಾಖಲೆಗಳಿಂದ ದೃಢಪಡುತ್ತದೆ. ಆದ್ದರಿಂದ ಇವರ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಶ್ರೀ ಆರ್. ಬಸಣ್ಣರವರು ತಮ್ಮ ಲಿಖಿತ ಹೇಳಿಕೆಯಲ್ಲಿ, ಡಾ. ಶಂಕರ್ ನಾಯಕ್ ರವರು ತಮಗೆ ಬಿಲ್ಲನ್ನು ತಯಾರಿಸು ಎಂದು ಹೇಳಿ, ಬಿಲ್ಲನ್ನು ತಯಾರಿಸಿಕೊಂಡು ಅವರೇ ಖಜಾನೆಗೆ ತೆಗೆದುಕೊಂಡು ಹೋಗಿ ಹಣ ಪಡೆದು ಸದರಿ ಹಣ ಏನು ಮಾಡಿದರು ಎಂಬುದರ ಬಗ್ಗೆ ತಮಗೆ ತಿಳಿಯದು ಎಂಬ ವಾದವನ್ನು ಒಪ್ಪಲು ಸಾಧ್ಯವಿಲ್ಲ ಏಕೆಂದರೆ ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು,

ವೈದ್ಯಾಧಿಕಾರಿಯವರಿಗೆ ಬಿಲ್ಲುಗಳನ್ನು ತಯಾರಿಸಲು ಸಹಕರಿಸಿ, ತಯಾರಿಸಿದ ಬಿಲ್ಲುಗಳನ್ನು ಸಂಬಂಧಪಟ್ಟ ರಿಜಿಸ್ಟರ್‌ನಲ್ಲಿ ನಮೂದಿಸದೆ ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವ ಆರೋಪವು ವಿಚಾರಣಾ ವರದಿಯಿಂದ ದೃಢಪಟ್ಟಿರುತ್ತದೆ.

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಡಾ.ಕೆ.ಎಸ್. ಶಂಕರ್ ನಾಯಕ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇವರು ಈ ಹಿಂದೆ ವೈದ್ಯಾಧಿಕಾರಿಯಾಗಿ ಸಾರ್ವಜನಿಕ ಆಸ್ಪತ್ರೆ, ಚೆನ್ನಗಿರಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಲ್.ಐ.ಸಿ. ಹೌಸಿಂಗ್ ಫೈನಾನ್ಸ್ ಲಿಮಿಟೆಡ್ ಇವರಿಂದ ರೂ.3,75,000/– ಸಾಲ ಪಡೆಯಲು ಜಾಮೀನುದಾರರ ಸಹಿ ಮತ್ತು ಮೊಹರನ್ನು ಫೋರ್ಜರಿ ಮಾಡಿರುವ ಆರೋಪಕ್ಕೆ ಸಂಬಂಧಿಸಿದಂತೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರಡಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಹಾಗೂ ಇವರು ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೊಂಡಜ್ಜಿ ಹಾಗೂ ಪ್ರಭಾರಿ ವೈದ್ಯಧಿಕಾರಿ, ಸರ್ಕಾರಿ ಗ್ರಾಮೀಣ ಆರೋಗ್ಯ ಕೇಂದ್ರ, ಕೊಂಡಜ್ಜಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ.1,94,809/– ನ್ನು ಶೇ.8ರ ಬಡ್ಡಿಯೊಂದಿಗೆ ಮತ್ತು ರೂ.1,36,226/– ಗಳ ಶೇ.50 ರಷ್ಟನ್ನು ಶೇ.8ರ ಬಡ್ಡಿಯೊಂದಿಗೆ ಇವರ ವಿರುದ್ಧ ಸಿವಿಲ್ ದಾವೆ ಹೂಡಿ ವಸೂಲಿ ಮಾಡುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿರುತ್ತದೆ.

ಹಾಗೂ ಶ್ರೀ ಆರ್.ಬಸಣ್ಣ, (ನಿವೃತ್ತ) ಕಿರಿಯ ಪುರುಷ ಆರೋಗ್ಯ ಸಹಾಯಕ ಇವರು ಸರ್ಕಾರಿ ಗ್ರಾಮೀಣ ಆರೋಗ್ಯ ಕೇಂದ್ರ, ಕೊಂಡಜ್ಜಿ, ಚಿತ್ರದುರ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಇವರು ಡಾ.ಕೆ.ಎಸ್. ಶಂಕರ್ ನಾಯಕ್, ವೈದ್ಯಾಧಿಕಾರಿ ಇವರ ಜೊತೆಯಲ್ಲಿ ಶಾಮೀಲಾಗಿ ಸರ್ಕಾರಕ್ಕೆ ಉಂಟು ಮಾಡಿರುವ ನಷ್ಟ ರೂ.1,36,226/– ರಲ್ಲಿ ಶೇ.50 ರಷ್ಟನ್ನು ಶೇ.8ರ ಬಡ್ಡಿಯೊಂದಿಗೆ ಅವರ ನಿವೃತ್ತಿ ಉಪದಾನದಿಂದ ವಸೂಲಿ ಮಾಡಲು, ಹಾಗೂ ಈ ಆರೋಪಕ್ಕೆ ಸಂಬಂಧಿಸಿದಂತೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ–214ರಡಿಯಲ್ಲಿ ಇವರ ಪಿಂಚಣಿಯ ಶೇ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ತೀರ್ಮಾನಿಸಿದೆ.

ಮೇಲ್ಕಂಡ ಸರ್ಕಾರದ ಈ ತೀರ್ಮಾನಕ್ಕೆ ಸಹಮತಿ ನೀಡುವಂತೆ, ಕರ್ನಾಟಕ ಲೋಕಸೇವಾ ಆಯೋಗವನ್ನು ಕೋರಲಾಗಿದ್ದು, ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (17) ರಲ್ಲಿ ಓದಲಾದ ಪತ್ರದಲ್ಲಿ ಕೆಳಕಂಡಂತೆ ತನ್ನ ಸಹಮತಿ ನೀಡಿದೆ.

"ಶ್ರೀ ಬಸಣ್ಣ, ಹಿರಿಯ ಪುರುಷ ಆರೋಗ್ಯ ಸಹಾಯಕ ಇವರಿಂದ ರೂ.1,36,226/– ರ ಶೇ.50 ರಷ್ಟನ್ನು ಶೇ.8ರ ಬಡ್ಡಿಯೊಂದಿಗೆ ಅವರ ನಿವೃತ್ತಿ ಉಪದಾನದಿಂದ ವಸೂಲಿ ಮಾಡಲು ಹಾಗೂ ಇವರ ದುರ್ನಡತೆಗೆ ಅವರ ಪಿಂಚಣಿಯಲ್ಲಿ ಶೇ.50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಹಾಗೂ ಡಾ. ಕೆ.ಎಸ್. ಶಂಕರ್ ನಾಯಕ್ ಇವರಿಗೆ ಈಗಾಗಲೇ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿ ಆಯೋಗದ ಸಹಮತಿ ಪಡೆಯಲಾಗಿರುವುದರಿಂದ ಇವರಿಂದ ಸರ್ಕಾರಕ್ಕೆ ಆಗಿರುವ ನಷ್ಟ ರೂ.1,36,226/– ಗಳಲ್ಲಿ ಶೇ.50 ರಷ್ಟು ಹಾಗೂ ರೂ.1,94,809/– ಗಳನ್ನು ಶೇ.8ರ ಬಡ್ಡಿಯೊಂದಿಗೆ ಅವರ ವಿರುದ್ದ ಸಿವಿಲ್ ದಾವೆ ಹೂಡುವ ಮೂಲಕ ವಸೂಲು ಮಾಡಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆ ಎಂದು ತಿಳಿಸಲು ನಿರ್ದೇಶಿತನಾಗಿದ್ದೇನೆ. "

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 376 ಎಂಎಸ್‌ಎ 2004, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಆರೋಪಿತ ಅಧಿಕಾರಿ/ನೌಕರರಿಗೆ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

| | |
|---|---|
| 1.ಡಾ. ಕೆ.ಎಸ್. ಶಂಕರ್ ನಾಯಕ್ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು | ಇವರು ಈ ಹಿಂದೆ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಚೆನ್ನಗಿರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಇವರಿಗೆ ಕೆಸಿಎಸ್(ಸಿಸಿಎ)ನಿಯಮಾವಳಿಗಳು 1957ರ ನಿಯಮ 8(viii)ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದೆ ಹಾಗೂ ಇವರು ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಪ್ರಭಾರಿ ವೈದ್ಯಾಧಿಕಾರಿ, ಸರ್ಕಾರಿ ಗ್ರಾಮೀಣ ಆರೋಗ್ಯ ಕೇಂದ್ರ, ಕೊಂಡಜ್ಜಿ, ಚಿತ್ರದುರ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ ರೂ.1,94,809/– ಶೇ.8ರ ಬಡ್ಡಿಯನ್ನು ಹಾಗೂ ರೂ.1,36,226/–ರಲ್ಲಿ ಶೇ.50 ರಷ್ಟನ್ನು ಶೇ.8ರ ಬಡ್ಡಿಯೊಂದಿಗೆ ಇವರ ವಿರುದ್ದ ಸಿವಿಲ್ ದಾವೆ ಹೂಡುವ ಮೂಲಕ ವಸೂಲಿ ಮಾಡುವ ದಂಡನೆ ವಿಧಿಸಿದೆ. |

| | |
|---|---|
| 2)ಶ್ರೀ ಆರ್.ಬಸಣ್ಣ, (ನಿವೃತ್ತ) ಕಿರಿಯ ಪುರುಷ ಆರೋಗ್ಯ ಸಹಾಯಕ | ಇವರು ಸರ್ಕಾರಿ ಗ್ರಾಮೀಣ ಆರೋಗ್ಯ ಕೇಂದ್ರ, ಕೊಂಡಜ್ಜಿ, ಚಿತ್ರದುರ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಇವರು ಎಸಗಿರುವ ಆರೋಪದಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ.1,36,226/– ರಲ್ಲಿ ಶೇ.50 ರಷ್ಟನ್ನು ಶೇ.8ರ ಬಡ್ಡಿಯೊಂದಿಗೆ ಅವರ ನಿವೃತ್ತಿ ಉಪದಾನದಿಂದ ವಸೂಲು ಮಾಡಲು ಹಾಗೂ ಈ ಆರೋಪಕ್ಕೆ ಸಂಬಂಧಿಸಿದಂತೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ–214 ರಡಿಯಲ್ಲಿ ಇವರ ಪಿಂಚಣಿಯ ಶೇ.50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1824

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2009–10ನೇ ಸಾಲಿನಿಂದ ಡಿಪ್ಲೊಮಾ ಕೋರ್ಸುಗಳಿಗೆ ಪರಿಷ್ಕೃತ ಪಠ್ಯಕ್ರಮಗಳನ್ನು ಅಳವಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಇಡಿ 259 ಟಿಪಿಇ 2008, ದಿನಾಂಕ: 21–1–2009

2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ:ತಾಂಶಿಇ 117 ಸಿಡಿಸಿ 2009–10, ದಿನಾಂಕ:30–6–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಡಿಪ್ಲೊಮಾ ಕೋರ್ಸುಗಳ ಪಠ್ಯಕ್ರಮಗಳನ್ನು ಒಂದು ಬಾರಿಗೆ ಮಾತ್ರ ಪರಿಷ್ಕರಿಸಲು ಕೆಲವೊಂದು ಷರತ್ತುಗಳಿಗೊಳಪಡಿಸಿ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ರಾಜ್ಯದಲ್ಲಿನ ಡಿಪ್ಲೊಮಾ ಕೋರ್ಸುಗಳ 1ನೇ ಮತ್ತು 2ನೇ ಸೆಮಿಸ್ಟರ್‌ನ ಪಠ್ಯಕ್ರಮಗಳನ್ನು ಪರಿಷ್ಕರಿಸಿ ಅಳವಡಿಸುವ ಕುರಿತಂತೆ ಪ್ರಸ್ತಾಪಿಸಲಾಗಿದೆ. ಅದರಂತೆ ಪಠ್ಯಕ್ರಮಗಳನ್ನು ಯಶಸ್ವಿ ಉದ್ದಿಮೆದಾರರು ಎನ್.ಐ.ಟಿ.ಟಿ.ಟಿ.ಆರ್, ಚೆನ್ನೈ ಹಾಗೂ ಬಾಹ್ಯ ವಿಷಯ ಪರಿಣಿತರ ಸಹಯೋಗದಿಂದ ಪರಿಷ್ಕರಿಸಲಾಗಿದ್ದು ಇದನ್ನು 2009–10ನೇ ಶೈಕ್ಷಣಿಕ ಸಾಲಿನಿಂದ ಅಳವಡಿಸಿಕೊಳ್ಳುವ ಸಲುವಾಗಿ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದ 146ನೇ ಕೇಂದ್ರ ಪರೀಕ್ಷಾ ಮಂಡಳಿ ಸಭೆಯಲ್ಲಿ ಮಂಡಿಸಿ ಒಮ್ಮತದಿಂದ ನಿರ್ಣಯಿಸಲಾಗಿದ್ದು ಈ ಸಂಬಂಧ ನಿಯಮಾವಳಿಗಳು ಹಾಗೂ ರೂಪುರೇಷೆಗಳನ್ನು ರಚಿಸಲಾಗಿರುವುದರಿಂದ ಡಿಪ್ಲೊಮಾ ಒಂದು ಮತ್ತು ಎರಡನೇ ಸೆಮಿಸ್ಟರ್‌ಗಳಿಗೆ 2009–10ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಪರಿಷ್ಕೃತ ಪಠ್ಯಕ್ರಮ ಹಾಗೂ ನಿಯಮಾವಳಿ / ರೂಪುರೇಷೆಗಳನ್ನು ಅಳವಡಿಸಿಕೊಳ್ಳಲು ಸರ್ಕಾರದ ಆದೇಶವನ್ನು ಹೊರಡಿಸಬೇಕೆಂದು ಕೋರಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 178 ಟಿಪಿಇ 2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಎಲ್ಲಾ ಪಾಲಿಟೆಕ್ನಿಕ್‌ನ ಡಿಪ್ಲೊಮಾ ಕೋರ್ಸುಗಳ ಒಂದನೇ ಮತ್ತು ಎರಡನೇ ಸೆಮಿಸ್ಟರ್‌ನ ಪಠ್ಯಕ್ರಮಗಳು 2009–10ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಪರಿಷ್ಕರಿಸಲ್ಪಟ್ಟಿರುತ್ತವೆ ಹಾಗೂ ಅನ್ವಯವಾಗುತ್ತವೆ. ಈ ಸಂಬಂಧದ ನಿಯಮಾವಳಿ / ರೂಪುರೇಶೆಗಳನ್ನು ಈ ಆದೇಶದ ಅನುಬಂಧದಲ್ಲಿ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**ಸರ್ಕಾರದ ಆದೇಶ ಸಂಖ್ಯೆ:ಇಡಿ 178 ಟಿಪಿಇ 2009, ಬೆಂಗಳೂರು, ದಿನಾಂಕ:01–08–2009ರ ಅನುಬಂಧ**

## REGULATIONS AND GUIDELINES FOR DIPLOMA COURSES AS PER THE CURRICULUM - C–09/10
### (with effect from the academic year 2009-10)

**1. TITLE AND DURATION OF THE PROGRAMS**

**1.1** The programs shall be called the diploma programs and abbreviated as DCE/ DME/DECE/DEEE/DCSE etc.

**1.2** The programs shall be of 2/3 academic years (31/2 years in case of evening courses)duration and conducted in 4/6 semesters with each semester having a duration of 16 weeks.

**1.3** The calendar of events in respect of the course shall be fixed by the Department of Technical Education from time to time.

**1.4** The examinations shall be conducted by Board of Technical Examination(BTE) at the end of each semester

**2. Admissions and Eligibility**

a) **For Engineering courses:-** Should have passed Karnataka SSLC or equivalent examination and have obtained a minimum of 35% marks each in Mathematics and Science subjects.

b) **For Sound Recording and Cinematography Courses:** Should have passed Karnataka PUC-2 or equivalent examination and have obtained a minimum of 35% marks each in PCM subjects.

c) **For Non-Engineering Courses:**

1) **Commercial Practice and Apparel Design and Fabrication Technology:-** Should have passed Karnataka SSLC or equivalent examination

2) **Library Science & Information management/ Business Administration:-** Should have passed Karnataka PUC-2 or equivalent examination.

**3. Duration of periods in the Class Time Table**:

The duration of each period in a day is 1 hour and the total periods of instruction/seminars/tutorial hours excluding interval and lunch break in a day should be uniformly maintained as 7 hours from Monday to Friday and 4 hours on Saturday (Theory and Practical).

**4. ATTENDANCE REQUIREMENT**

**4.1** In each semester, the candidate has to put in a minimum attendance of 75% in each subject with a provision of condonation of 15% of the attendance by the Secretary, Board of Technical Examination on the specific recommendation of the Principal on the reasons such as medical grounds, International/ National/ State level sports, NCC, NSS.

**4.2** The basis for the calculation of the attendance shall be the period prescribed by the Department of Technical Education by its calendar of events. For the first semester students, the same is reckoned from the date of admission of the student.

**4.3** The students shall be informed about their attendance position monthly by the Polytechnics so that the students shall be cautioned to make up the shortage. The Principals of the Polytechnics shall submit the list of students who have been detained for shortage of attendance by the end of the semester to the Secretary, Board of Examination, Dept. of Technical Education, Bangalore, Karnataka.

**5. INTRENAL ASSESMENT**:

**5.1** For each subject three tests should be conducted and best of two shall be taken for assessment Decimals shall be rounded off to next higher digit.
The decimals below 0.5 and above 0.5 shall be rounded off to the next higher digit. i.e for example: 8.1 to 8.5 and 8.6 to 8.9 shall be rounded off to 9
Round off to next higher digit shall be for the average marks and not for individual test marks.

**5.2** Each subject of theory or practical shall have a maximum internal assessment marks of 25 (20 marks for test and 5 marks for attendance).

**5.3** Award of marks for attendance will be as per the range given below:

| | |
|---|---|
| 60% to 75% | - 2 marks |
| more than 75% upto 85% | - 3 marks |
| more than 85% upto 95% | - 4 marks |
| more than 95% upto 100% | - 5 marks |

**5.4** Award of internal assessment marks for drawing/ workshop shall be based on aggregate marks of all the exercises/ graded exercises carried out and evaluated in the class room through out the semester

**5.5** The internal assessment marks in a theory subject shall be based on three tests conducted at the end of 6, 10 and 14 weeks of each semester. An additional test may be conducted for desirous/ absent students before the end of the semester to give an opportunity to such students to improve their internal assessment marks. The test shall be answered in **"Blue Books"** with pages serially numbered. These Blue Books shall be signed by the student and the concerned faculty and kept in the custody of Principal of the Polytechnic for verification and academic audit and it should be preserved as per the BTE norms.

**6. Internal Assessment for Project Work**:

To allocate the internal assessment for the Project Work three reviews have to be conducted and the average of the three should be taken for the final assessment.

**7. Minimum Pass Marks :**

**Theory Examination** : 35% in the end examination-

(A minimum of 35 marks in the end examination and a combined minimum of 45 marks of both Internal Assessment and end examination marks put together.)

**Practical Examination**: 50% in the end examination - (A minimum of 50 marks in the end examination and a combined minimum of 60 marks of both Internal Assessment and practical examination marks put together.)

**8. Eligibility and Promotion for the Examinations**:

8.1 There shall not be any restriction for promotion from odd semester to even semester, provided the candidate has registered his/her name for the examination for the semester and has fulfilled the attendance requirement.

8.2 A candidate is eligible for promotion from even semester to odd semester (i.e to next academic year) provided, the candidate has not failed in more than four subjects of lower semester examinations.

For example:

a) A candidate seeking eligibility to 3$^{rd}$ semester should not have failed in more than 4 subjects of first and second semesters put together.

b) A candidate seeking eligibility to 5$^{th}$ semester should not have failed in more than 4 subjects of 1$^{st}$ to 4$^{th}$ semesters put together.

**9. Classification of successful candidates**:

Classifications of candidates will be done as specified below:

9.1 **Classification of the Semester Result:**

**a) First Class with Distinction**

A candidate shall be declared to have passed in First Class with Distinction if he / she secures not less than 75% of the aggregate marks in all the subjects of the semester put together.

**b) First Class**

A candidate shall be declared to have passed in First Class with Distinction if he / she secures not less than 60% of the aggregate marks in all the subjects of the semester put together.

**c) Second Class:**

All other successful candidates will be declared to have passed in Second Class.

9.2 **Award of Diploma**

**a) First Class with Distinction**

A candidate shall be declared to have passed in First Class with Distinction if he / she secures not less than 75% of the aggregate marks in 5th and 6th semesters put together and passes the above semesters in first attempt itself

**b) First Class**

A candidate will be declared to have passed in First Class if he / she secures not less than 60% of the aggregate marks in 5th and 6th semesters put together and passes the above semesters in first attempt itself

**c) Second Class:**

All other successful candidates will be declared to have passed in Second Class.

**10. Provision for improvement**:

10.1 **Surrender of Results:** The candidate has to apply for the improvement by surrendering his/her results with in 30 days after the announcement of results by paying fees as prescribed by BTE.

10.2 No improvement is allowed in Practical / Lab subjects or Project work or Industrial Training assessment. However, improvement is allowed in drawing subject.

10.3 If improvement is not achieved, the marks obtained in the current Examination hold good.

10.4 Improvement is not allowed in respect to the candidates who are punished under Mal-practices in any Examination.

10.5 All the candidates who wish to appear for improvement of performance shall deposit the original Marks cards of the semester pertaining to the subject/ subjects to BTE. Then the revised Memorandum of marks of the current examination will be issued

**11. MAXIMUM PERIOD FOR COMPLETION OF DIPLOMA COURSES**

Maximum period for completion of the course shall be thrice the duration of the course from the date of First admission (includes the period of detention and discontinuation of studies by student etc) failing which they will have to forfeit the claim for qualifying for the award of Diploma (They will not be permitted to appear for examinations after that date). This rule applies for all Diploma courses of 3 or 31/2 years of engineering and non-engineering courses.

**12. ELIGIBILITY FOR AWARD OF DIPLOMA**

A candidate is eligible for award of Diploma Certificate if he / she fulfils the following academic regulations.

i. He / She pursued a course of study for not less than 3 / 3 ½ academic years & not more than 6 / 7 academic years.

ii. He / she has completed all the subjects.

Students who fail to fulfill all the academic requirements for the award of the Diploma within 6 / 7 academic years from the year of admission shall forfeit their seat in the course & their seat shall stand cancelled.

**13 RE-VALUATION:**

a) There is a system of Re-valuation or providing Xerox copies of valued Answer Scripts. The procedure for revaluation is as prescribed by the BTE, Karnataka.

b) There is no provision for recounting of the valued answer scripts

**14. MAL PRACTICE CASES:**

If any candidate resorts to any Mal Practice during examinations, he/she shall be booked and the Punishment will be awarded as per rules and regulations framed by BTE, Karnataka from time to time.

| | | | |
|---|---|---|---|
| 2 | ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ವಿಶೇಷ ಕಾರ್ಯದರ್ಶಿಗಳು, ಪ್ರಾದೇಶಿಕ ಆಯುಕ್ತರು, ವಾಣಿಜ್ಯ ತೆರಿಗೆ ಆಯುಕ್ತರು; ಅಬಕಾರಿ ಆಯುಕ್ತರು; ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಹಾಗೂ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಿರ್ದೇಶಕರು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಅಪರ ಆರಕ್ಷಕ ಮಹಾ ನಿರೀಕ್ಷಕರು, ಆರಕ್ಷಕ ಆಯುಕ್ತರು, ಪ್ರಧಾನ ಮುಖ್ಯ ಅರಣ್ಯಪಾಲಕರು, ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 15,000–00 |
| 3 | ಅಪರ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಮುಖ್ಯ ಮಂತ್ರಿಯವರ ಪತ್ರಿಕಾ ಕಾರ್ಯದರ್ಶಿ ಇಲಾಖಾ ಮುಖ್ಯಸ್ಥರು (ಮೇಲೆ (2)ರಲ್ಲಿ ತಿಳಿಸಿರುವವರನ್ನು ಹೊರತುಪಡಿಸಿ) | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 10,000–00 |
| 4 | ಜಿಲ್ಲಾಧಿಕಾರಿಗಳು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 15,000–00 |
| 5 | ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 5,000–00 |

ನಿಗಧಿಪಡಿಸಿರುವ ಪರಿಷ್ಕೃತ ದರಗಳು ಕೂಡಲೇ ಜಾರಿಗೆ ಬರುತ್ತದೆ. ಈ ಬಗ್ಗೆ ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1707

**ಸಿ. ಶಾಮರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಬೆಂಗಳೂರು ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2009–10ನೇ ಸಾಲಿನ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ –ಸಮಿತಿ ರಚನೆ.

**ಓದಲಾಗಿದೆ :** ಕುಲಸಚಿವರು, ಕೃಷಿ ವಿಶ್ವವಿದ್ಯಾಲಯದ ಬೆಂಗಳೂರು ರವರ ಪತ್ರ ಸಂಖ್ಯೆ: R/S-I/&S II/UG Admn. PT/2009-10 ದಿನಾಂಕ:9.5.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ 2009–10ನೇ ಸಾಲಿನಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ದಿನಾಂಕ:11.7.2009 ಮತ್ತು 12.7.2009ರಂದು ನಡೆಯುವ ಸಂದರ್ಶನಕ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ. ಸದರಿ ಸಮಿತಿಯಲ್ಲಿ ಡಾ:ಎಂ.ಜಿ. ಚಂದ್ರಕಾಂತ್ ಡೀನ್ (ಅಗ್ರಿ) ಕೃಷಿ ಕಾಲೇಜು ಜಿ.ಕೆ.ವಿ.ಕೆ. ಬೆಂಗಳೂರು ರವರನ್ನು ಅಧ್ಯಕ್ಷರನ್ನಾಗಿ ಹಾಗೂ ಕೃಷಿ ಇಲಾಖೆ ಹಾಗೂ ಪಶುಸಂಗೋಪನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖಾ ವತಿಯಿಂದ ಒಬ್ಬರಂತೆ ಸದಸ್ಯರನ್ನಾಗಿ ನೇಮಿಸಲು ವಿನಂತಿಸಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕೃತೋಇ 113 ಕೃವಿವಿ 2009, ಬೆಂಗಳೂರು, ದಿನಾಂಕ:8ನೇ ಜುಲೈ 2009**

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2009–10ನೇ ಸಾಲಿನ ಪದವಿ ಕೋರ್ಸ್ ‍ಗಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ದಿನಾಂಕ:11.7.2009 ಮತ್ತು 12.7.2009 ರಂದು ನಡೆಯಲಿರುವ ಸಂದರ್ಶನದಲ್ಲಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ:

| | | |
|---|---|---|
| 1 | ಡಾ:ಎಂ.ಜಿ. ಚಂದ್ರಕಾಂತ್, ಡೀನ್ (ಕೃಷಿ) ಕೃಷಿ ಕಾಲೇಜು, ಯುಎಎಸ್, ಜಿ.ಕೆ.ವಿ.ಕೆ. ಬೆಂಗಳೂರು. | ಅಧ್ಯಕ್ಷರು |

| | | |
|---|---|---|
| 2 | ಡಾ: ಕೆ.ವಿ. ಕುಲಕರ್ಣಿ, ಜಂಟಿ ನಿರ್ದೇಶಕರು (ವಿಸ್ತರಣೆ ಮತ್ತು ತರಬೇತಿ) ಕೇಂದ್ರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | ಸದಸ್ಯರು |
| 3 | ಶ್ರೀ ಎ.ಎನ್. ಶಂಕರಪ್ಪ, ಜಂಟಿ ಕೃಷಿ ನಿರ್ದೇಶಕರು (ವಿಸ್ತರಣೆ ಮತ್ತು ತರಬೇತಿ) ಕೃಷಿ ಆಯುಕ್ತರ ಕಾರ್ಯಾಲಯ, ಬೆಂಗಳೂರು–1 | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1714

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕೃಷಿ ಮತ್ತು ತೋಟಗಾರಿಕೆ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ–ಬೆಂಗಳೂರು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :**
1. ಪತ್ರ ಸಂಖ್ಯೆ : ವಶ್ರೇಅ(3)/20/2005–06, ದಿನಾಂಕ :15.2.2006.
2. ಸರ್ಕಾರದ ನೋಟೀಸ್ ಸಂಖ್ಯೆ :ಆಕುಕ 18 ಎಂಸಿಎಲ್ 2005, ದಿನಾಂಕ :6.4.2006.
3. ಡಾ : ಎ.ಎಸ್. ದಿನೇಶ್ ಉಪನ್ಯಾಸಕರು, ಅರವಳಿಕೆ ವಿಭಾಗ ಇವರ ಹೇಳಿಕೆ ದಿನಾಂಕ :8.5.2006.
4. ಸರ್ಕಾರದ ಆದೇಶ ಸಂಖ್ಯೆ :ಆಕುಕ 45 ಕೆವಿಎಂ 2008, ದಿನಾಂಕ :30.8.2008.

**ಪ್ರಸ್ತಾವನೆ:**

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:15.2.2006ರ ಪತ್ರದಲ್ಲಿ ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಅನಧಿಕೃತ ಗೈರುಹಾಜರಾಗಿರುವುದಾಗಿ ತಿಳಿಸಿ ದೋಷಾರೋಪಣೆ ಪಟ್ಟಿಯನ್ನು ಸಿದ್ದಪಡಿಸಿ ಸಲ್ಲಿಸಿರುತ್ತಾರೆ. ಸದರಿಯವರು ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಅರವಳಿಕೆ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 25.5.2004 ರಿಂದ 22.8.2004ರ ವರೆವಿಗೆ 90 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದ್ದು ದಿನಾಂಕ:23.8.2004ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದಡಿ ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಇವರಿಗೆ ದೋಷಾರೋಪಣೆಗಳನ್ನು, ದುರ್ನಡತೆಯ ಮತ್ತು ದುರ್ವರ್ತನೆಯ ಆರೋಪದ ವಿವರಣಾ ಹೇಳಿಕೆಯನ್ನು ಆರೋಪಗಳನ್ನು ಸಮರ್ಥಿಸುವ ದಾಖಲೆಗಳು ಮತ್ತು ಸಾಕ್ಷಿಗಳ ಪಟ್ಟಿಯನ್ನು ಅನುಬಂಧ–1 ರಿಂದ 4ರಲ್ಲಿ ಮೇಲೆ (2)ರಲ್ಲಿ ಓದಲಾದ ನೋಟೀಸ್ ನೊಂದಿಗೆ ಹೊರಡಿಸಲಾಗಿತ್ತು.

ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಯನ್ನು ಸಲ್ಲಿಸಿ, ದಿನಾಂಕ:23.8.2004 ರಿಂದಲೇ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾ ಸರ್ಕಾರಿ ಆದೇಶದಲ್ಲಿ ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ನಿರಂತರ ಅನಧಿಕೃತ ಗೈರುಹಾಜರಿ ನಡತೆಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಅಮಾನತ್ತಿನಲ್ಲಿಡಲಾಗಿತ್ತು.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಡಾ: ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರಿಗೆ ಸಂಬಂಧಿಸಿದಂತೆ ಮಾತ್ರ ಅಮಾನತ್ ಆದೇಶವನ್ನು ಹಿಂದಕ್ಕೆ ಪಡೆದು ದಿನಾಂಕ:23.8.2004ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 18 ಎಂಸಿಎಲ್ 2005, ಬೆಂಗಳೂರು, ದಿನಾಂಕ:30ನೇ ಜೂನ್, 2009**

ಕರ್ನಾಟಕ ನಾಗರೀಕ ಸೇವಾ ನಿಯಮಗಳ (ಸಿಸಿಎ) ನಿಯಮಗಳು 1957ರ ನಿಯಮ 10(5)ರ ಪ್ರಕಾರ ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ಸರ್ಕಾರಿ ಆದೇಶ ಸಂಖ್ಯೆ ಆಕುಕ 45 ಕೆವಿಎಂ 2008 ದಿನಾಂಕ:30.8.2008ನ್ನು ಅವರಿಗೆ ಸಂಬಂಧಿಸಿದಂತೆ ಮಾತ್ರ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮ 252ರ ಪ್ರಕಾರ ಡಾ:ಎ.ಎಸ್. ದಿನೇಶ್, ಉಪನ್ಯಾಸಕರು, ಅರವಳಿಕೆ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ರಾಜೀನಾಮೆಯನ್ನು ಅವರು ಅನಧಿಕೃತ ಗೈರುಹಾಜರಾದ ದಿನಾಂಕ:23.8.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1717

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ವಿಷಯ :** ಡಾ: ಟಿ.ಜಿ. ಮಂಜುನಾಥ್, ಉಪನ್ಯಾಸಕರು, ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಹಾಗೂ ಡಾ:ನಂದಕಿಶೋರ್, ಉಪನ್ಯಾಸಕರು, ವೈದ್ಯ ಶಾಸ್ತ್ರ, ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಅನಧಿಕೃತ ಗೈರುಹಾಜರಿ ಶಿಸ್ತು–ಕ್ರಮ ಕುರಿತು.

**ಓದಲಾಗಿದೆ :**
1. ಪತ್ರ ಸಂಖ್ಯೆ : ವಶ್ರೇಅ(3)/20/2005–06, ದಿನಾಂಕ :15.2.2006.
2. ಸಂಖ್ಯೆ :ಆಕುಕ 18 ಎಂಸಿಎಲ್ 2005, ದಿನಾಂಕ :6.4.2006ರ ನೋಟೀಸು.
3. ಸಂಖ್ಯೆ :ಆಕುಕ 18 ಎಂಸಿಎಲ್ 2005, ದಿನಾಂಕ :6.4.2006ರ ನೋಟೀಸು
4. ವಿಜಯ ಕರ್ನಾಟಕ ಪತ್ರಿಕೆ–ದಿನಾಂಕ :11.8.2008.
5. ಸರ್ಕಾರದ ಆದೇಶ ಸಂಖ್ಯೆ :ಆಕುಕ 45 ಕೆವಿಎಂ 2008, ದಿನಾಂಕ :30.8.2008.

**ಪ್ರಸ್ತಾವನೆ:**

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ:ಟಿ.ಜಿ. ಮಂಜುನಾಥ್ ಉಪನ್ಯಾಸಕರು, ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು ಹಾಗೂ ಡಾ:ನಂದಕಿಶೋರ್, ಉಪನ್ಯಾಸಕರು, ವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರ ಅನಧಿಕೃತ ಗೈರುಹಾಜರಾತಿ ಬಗ್ಗೆ ಕರಡು ದೋಷಾರೋಪಣ ಪಟ್ಟಿಯನ್ನು ಸಂಬಂಧಿಸಿದ ದಾಖಲೆಗಳ ಪ್ರತಿಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು.

ಡಾ: ಟಿ.ಜಿ. ಮಂಜುನಾಥ್, ಉಪನ್ಯಾಸಕರು, ಜನರಲ್ ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರು ದಿನಾಂಕ:1.8.2000ರಿಂದ ಅನಧಿಕೃತ ಗೈರುಹಾಜರಾತಿ ಬಗ್ಗೆ ಮೇಲೆ (2)ರಲ್ಲಿ ಓದಲಾದ ದೋಷಾರೋಪಣಾಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಹೊರಡಿಸಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ನಂದಕಿಶೋರ್, ಉಪನ್ಯಾಸಕರು, ವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರು ದಿನಾಂಕ:15.3.2005ರಿಂದ ಕರ್ತವ್ಯಕ್ಕೆ ಗೈರು ಹಾಜರಾತಿ ಬಗ್ಗೆ ಅವರಿಗೆ ಮೇಲೆ (3)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾಪಟ್ಟಿಯನ್ನು ಹೊರಡಿಸಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ಟಿ.ಜಿ. ಮಂಜುನಾಥ್, ಉಪನ್ಯಾಸಕರು ಮತ್ತು ಡಾ: ನಂದಕಿಶೋರ್ ಉಪನ್ಯಾಸಕರು, ಇವರಿಗೆ ನೊಂದಾಯಿತ ಅಂಚೆ ಮೂಲಕ ಹೊರಡಿಸಿದ ನೋಟೀಸ್‌ಗಳು ಜಾರಿಯಾಗದೆ ಹಿಂತಿರುಗಿ ಬಂದಿದ್ದವು.

ಡಾ: ಟಿ.ಜಿ. ಮಂಜುನಾಥ್, ಉಪನ್ಯಾಸಕರು ಮತ್ತು ಡಾ:ನಂದಕಿಶೋರ್, ಉಪನ್ಯಾಸಕರು ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಕ್ರಮಸಂಖ್ಯೆ(4)ರಲ್ಲಿ ಓದಲಾದ ದಿನ ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿತ್ತು. ಅದಾಗ್ಯೂ, ಅವರಿಂದ ಪ್ರತಿಕ್ರಿಯೆ ಇರುವುದಿಲ್ಲ.

ಏತನ್ಮಧ್ಯೆ, ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ:ಟಿ.ಜಿ. ಮಂಜುನಾಥ್, ಉಪನ್ಯಾಸಕರು, ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಹಾಗೂ ಡಾ:ನಂದಕಿಶೋರ್, ಉಪನ್ಯಾಸಕರು, ವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ನಿರಂತರ ಅನಧಿಕೃತ ಗೈರುಹಾಜರಿ ದುರ್ನಡತೆಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಅಮಾನತ್ತಿನಲ್ಲಿಡಲಾಗಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಡಾ:ಟಿ.ಜಿ. ಮಂಜುನಾಥ್, ಉಪನ್ಯಾಸಕರು ಮತ್ತು ಡಾ:ನಂದಕಿಶೋರ್ ಉಪನ್ಯಾಸಕರು ಬೆಂಗಳೂರು ವೈದ್ಯಕೀಯ ಕಾಲೇಜು ಸೇವೆಯಿಂದ ವಜಾ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 18 ಎಂಸಿಎಲ್ 2005, ಬೆಂಗಳೂರು, ದಿನಾಂಕ:30ನೇ ಜೂನ್, 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಪ್ರಕಾರ ಅದೇ ನಿಯಮಗಳ ನಿಯಮ 8 (VIII) ರನ್ವಯ ಡಾ:ಟಿ.ಜಿ. ಮಂಜುನಾಥ್, ಉಪನ್ಯಾಸಕರು, ಜನರಲ್ ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು ಹಾಗೂ ಡಾ: ನಂದಕಿಶೋರ್, ಉಪನ್ಯಾಸಕರು, ವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು ಇವರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1718

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2009–10ನೇ ಸಾಲಿಗೆ ಕಿಯೋನಿಕ್ಸ್ ಸಂಸ್ಥೆಗೆ ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 30 ಆಡವಿ 2009 ದಿನಾಂಕ :12.5.09.
2. ನಿರ್ದೇಶಕರು [ಆಪರೇಷನ್] ಕಿಯೋನಿಕ್ಸ್ ರವರ ಪತ್ರ ಸಂ,KSEDC/INFRA/ITPH/01/09-10 ದಿನಾಂಕ :9.6.2009.
3. ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ ಇವರ ಪತ್ರ ಸಂ :ಮಾತಂನಿ/ಲೆಕ್ಕ–2/ ಕಿಯೋನಿಕ್ಸ್/ ಐಟಿ ಪಾರ್ಕ್/09–10/214, ದಿನಾಂಕ :25.6.2009.
4. ಸರ್ಕಾರದ ಆದೇಶ ಸಂಖ್ಯೆ :ಆಕುಕ 45 ಕೆವಿಎಂ 2008, ದಿನಾಂಕ :30.8.2008.

**ಪ್ರಸ್ತಾವನೆ:**

2009–10 ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನ–ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ] ರಡಿಯಲ್ಲಿ ರೂ. 920.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಕಿಯೋನಿಕ್ಸ್ ಸಂಸ್ಥೆಗೆ ರೂ. 30.00 ಲಕ್ಷ [ರೂ. ಮೂವತ್ತು ಲಕ್ಷಗಳು ಮಾತ್ರ]ಗಳ ಅನುದಾನವನ್ನು ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ನಿರ್ದೇಶಕರು ಮಾತಂ ಮತ್ತು ಜೈತಂ ನಿರ್ದೇಶನಾಲಯ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ:25.6.2009ರ ಪತ್ರದಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಮೇಲೆ [1] ರಲ್ಲಿನ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾಗಿರುವ ರೂ. 30.00 ಲಕ್ಷಗಳ ಅನುದಾನವನ್ನು ಉಲ್ಲೇಖ (2)ರಲ್ಲಿ ಕಿಯೋನಿಕ್ಸ್ ಸಂಸ್ಥೆಯವರು ಪ್ರಸ್ತಾಪಿಸಿರುವಂತೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕಿಯೋನಿಕ್ಸ್ ಸಂಸ್ಥೆಗೆ ರೂ. 30.00 ಲಕ್ಷ [ರೂ., ಮುವ್ವತ್ತು ಲಕ್ಷಗಳು ಮಾತ್ರ] ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 43 ಅಡವಿ 2009, ಬೆಂಗಳೂರು, ದಿನಾಂಕ:13ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2009–10ನೇ ಸಾಲಿಗೆ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ರೂ. 30.00 ಲಕ್ಷಗಳ (ಮುವ್ವತ್ತು ಲಕ್ಷ ರೂ.ಗಳು ಮಾತ್ರ]ಅನುದಾನವನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ [ಕಿಯೋನಿಕ್ಸ್] ಸಂಸ್ಥೆಗೆ ನೀಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಸೆಳೆದು [ಡ್ರಾ ಮಾಡಿ] ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)_ ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯ ನಿರ್ದೇಶಕರು [ನಿರ್ವಹಣೆ] ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ:16.5.08 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1725

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಉನ್ನತಶಿಕ್ಷಣ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕಿನ ಕುಶಾಲನಗರ ಹೋಬಳಿ ಚಿಕ್ಕಳುವಾರ ಗ್ರಾಮದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರವನ್ನು ಸ್ಥಾಪಿಸಲು ಅನುದಾನ ಒದಗಿಸುವ ಬಗ್ಗೆ.,

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ :ಇಡಿ 77 ಯೋಯೋಕ 2009 ಬೆಂಗಳೂರು ದಿನಾಂಕ :16.4.2009 (ಇಡಿ 57ಎ ಸ್ಕೀಮರ (ಯುನಿಕ್) 2009 ದಿನಾಂಕ :16.4.2009.
2. ಹಣಕಾಸು ಅಧಿಕಾರಿ, ಮಂಗಳೂರು ವಿಶ್ವವಿದ್ಯಾನಿಲಯ ರವರ ಪತ್ರ ಸಂಖ್ಯೆ :ಮವಿ:ಹವಿ/ ಹ17/ ಅಭಿವೃದ್ಧಿ ಅನುದಾನ/2009–10 ದಿನಾಂಕ :30.5.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಲೆಕ್ಕಶೀರ್ಷಿಕೆ "2202–03–1–2–0–05–101 ಅಡಿಯಲ್ಲಿ ರೂ. 170.00 ಲಕ್ಷಗಳನ್ನು ಮಂಜೂರು ಮಾಡಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು ಕುಶಾಲನಗರ ಹೋಬಳಿಯ ಚಿಕ್ಕಳುವಾರು ಗ್ರಾಮದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಸ್ಥಾಪಿಸಲು ರೂ. 2.00 ಕೋಟಿ ಸೇರಿದಂತೆ ಒಟ್ಟು ರೂ. 370.00 ಲಕ್ಷಗಳಿಗೆ ಕ್ರಿಯಾಯೋಜನೆ ತಯಾರಿಸಿ, ಮೊದಲ ತ್ರೈಮಾಸಿಕ ಕಂತಿನ ಅನುದಾನ ರೂ. 92.50 ಲಕ್ಷಗಳನ್ನು ಬಿಡುಗಡೆಗೊಳಿಸುವಂತೆ ಹಣಕಾಸು ಅಧಿಕಾರಿ, ಮಂಗಳೂರು ವಿಶ್ವವಿದ್ಯಾನಿಲಯರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 52 ಯುಡಿವಿ 2009, ಬೆಂಗಳೂರು, ದಿನಾಂಕ:20ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2009–10ನೇ ಸಾಲಿಗೆ ಕೊಡಗು ಜಿಲ್ಲೆ ಸೋಮವಾರ ಪೇಟೆ ತಾಲ್ಲೂಕಿನ ಕುಶಾಲನಗರ ಹೋಬಳಿ ಚಿಕ್ಕಳುವಾರ ಗ್ರಾಮದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಸ್ಥಾಪಿಸಲು ಆಯವ್ಯಯದಲ್ಲಿ ನಿಗಧಿಪಡಿಸಿರುವ ರೂ 200.00 ಲಕ್ಷಗಳಲ್ಲಿ (ಇನ್ನೂರು ಲಕ್ಷಗಳು) ಮೊದಲ ತ್ರೈಮಾಸಿಕ ಕಂತಾಗಿ ರೂ. 50.00 ಲಕ್ಷಗಳನ್ನು (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ವೆಚ್ಚ ಮಾಡುವ ಮುನ್ನ ಕಾರ್ಯಕ್ರಮ ಅನುಷ್ಠಾನಗೊಳಿಸುವ ಅಧಿಕಾರಿಗಳು ಈ ಹಿಂದಿನ ಸಾಲಿನ ಆದೇಶದಲ್ಲಿ ತಿಳಿಸಿದಂತೆ ಎಲ್ಲಾ ನಿಯಮಗಳನ್ನು ಪಾಲಿಸಲು ಸೂಚಿಸಿದೆ.

ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ "2202–03–102–0–05–101 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 937 ವೆಚ್ಚ–8/09 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1761

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಶಿಕ್ಷಣ ಸಚಿವಾಲಯ

**ವಿಷಯ :** ಆಯುಕ್ತರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡರವರಿಗೆ ಕಛೇರಿ ಕೆಲಸಗಳಿಗಾಗಿ ವಾಹನವನ್ನು ಖರೀದಿಸಲು ಅನುಮತಿ ನೀಡುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ :ಇಡಿ 76 ಯೋಯೋಕ 2009, ಬೆಂಗಳೂರು, ದಿನಾಂಕ :28.4.2009.

2. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಪತ್ರ ಸಂಖ್ಯೆ :ಎ1/ಲೆ.ಪ./ವಾಹನಖರೀದಿ/2007–08, ದಿನಾಂಕ :11.6.2009.

**ಪ್ರಸ್ತಾವನೆ:**

1. ಮೇಲೆ ಓದಲಾದ (1) ಸರ್ಕಾರದ ಆದೇಶದಲ್ಲಿ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇಲ್ಲಿಗೆ 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–02–001–0–06–041, 195 ಮತ್ತು 059 (ಯೋಜನೆ)ರಡಿ ಒಟ್ಟು 40.00 ಲಕ್ಷರೂಗಳನ್ನು ಒದಗಿಸಲಾಗಿದೆ. ಅದರಲ್ಲಿ ಸಾರಿಗೆ ವೆಚ್ಚಗಳಿಗಾಗಿ 10.00 ಲಕ್ಷರೂಪಾಯಿಗಳನ್ನು ಒದಗಿಸಿದೆ.

2. ಮೇಲೆ ಓದಲಾದ (2)ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡರವರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಪರ ಆಯುಕ್ತರು, ನಿರ್ದೇಶಕರು ಮತ್ತು ಸಹ ನಿರ್ದೇಶಕರು (ಆಡಳಿತ) ಇವರುಗಳಿಗೆ ಕಛೇರಿ ಆಡಳಿತಾತ್ಮಕ ಉಪಯೋಗಕ್ಕಾಗಿ ಸ್ವಂತ ವಾಹನಗಳು ಇಲ್ಲದಿರುವುದರಿಂದ ಮೂರು ವಾಹನಗಳನ್ನು ಸರ್ಕಾರದ ಆದೇಶದಂತೆ ಖಾಸಗಿ ಏಜೆನ್ಸಿಯವರುಗಳಿಂದ ಬಾಡಿಗೆಗೆ ಪಡೆಯುತ್ತಿದ್ದು, ಅನೇಕ ತೊಂದರೆಗಳಿಂದಾಗಿ, ಕನಿಷ್ಠ ಅಪರ ಆಯುಕ್ತರಿಗಾಗಿ ಒಂದು ವಾಹನವನ್ನು 6.25 ಲಕ್ಷರೂ.ಗಳಲ್ಲಿ ಖರೀದಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :ಇಡಿ 143 ಯೋಯೋಕ 2009, ಬೆಂಗಳೂರು, ದಿನಾಂಕ :17ನೇ ಜುಲೈ, 2009**

**[ಇಡಿ :90 :ಸ್ವೀಮರ (ಯುನಿಕ್) 2009, ದಿನಾಂಕ :17.7.2009]**

3. 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–02–001–06–195 (ಯೋಜನೆ) ಅಡಿ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡರವರಿಗೆ ಸಾರಿಗೆ ವೆಚ್ಚಕ್ಕಾಗಿ ಒದಗಿಸಲಾಗಿರುವ 10.00 ಲಕ್ಷರೂ.ಗಳಲ್ಲಿ (ಹತ್ತು ಲಕ್ಷರೂಪಾಯಿಗಳು ಮಾತ್ರ) 5.00 ಲಕ್ಷರೂ.ಗಳ (ಐದುಲಕ್ಷರೂಪಾಯಿಗಳು ಮಾತ್ರ) ಮಿತಿಯೊಳಗೆ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರಿಗೆ ಕಛೇರಿ ಉಪಯೋಗಕ್ಕಾಗಿ ಒಂದು ಸ್ವಂತ ವಾಹನವನ್ನು, ಖರೀದಿಗಳಿಗೆ ಸಂಬಂಧಿಸಿದ ಪ್ರಚಲಿತವಿರುವ ಎಲ್ಲಾ ನಿಯಮಗಳನ್ನು ಪಾಲಿಸುವ ಷರತ್ತನ್ನು ವಿಧಿಸಿ ಖರೀದಿಸಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರಿಗೆ ಅನುಮತಿ ನೀಡಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ :ಆಇ 930 ವೆಚ್ಚ 8/09, ದಿನಾಂಕ :3.7.2009ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1762

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2009–10ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ರಾಮನಗರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ :ಆರ್–18014 :03 :2009–10–ಡಿಆರ್‌ಡಿಎ (ಎಸ್‌ಆರ್ ನಂ. 10) ದಿನಾಂಕ :13.4.2009.

2. ರಾಜ್ಯ ಸರ್ಕಾರದ ಆದೇಶ ಗ್ರಾಅಪ 1 ಎಸ್‌ಜೆವೈ (ಡಿಆರ್ ಡಿಎ) 2009, ಬೆಂಗಳೂರು, ದಿನಾಂಕ:20.5.2009.

3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ :ಆರ್–17014 :10 :2009–10–ಡಿಆರ್‌ಡಿಎ (ಎಸ್‌ಆರ್ ನಂ. 32) ದಿನಾಂಕ :19.6.2009

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಭಾಗಶಃ ಅನುದಾನ ರೂ. 3,98,75,000 ಗಳನ್ನು ಚಿಕ್ಕಬಳ್ಳಾಪುರ, ರಾಮನಗರ ಮತ್ತು ರಾಯಚೂರು ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 26 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರವು ಉಲ್ಲೇಖಿತ (2)ರ ಆದೇಶದಲ್ಲಿ ಮೊದಲನೇ ಕಂತಿನ ಅನುದಾನ ರೂ. 1,32,92,000 ಬಿಡುಗಡೆ ಮಾಡಲಾಗಿತ್ತು. ಕೇಂದ್ರ ಸರ್ಕಾರ ಉಲ್ಲೇಖಿತ (3)ರ ಆದೇಶದಲ್ಲಿ ರಾಮನಗರ ಜಿಲ್ಲಾ ಪಂಚಾಯತಿಗೆ ರೂ. 13,51,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ರಾಮನಗರ ಜಿಲ್ಲಾ ಪಂಚಾಯಿತಿಗೆ ರೂ. 4,50,000ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ:15ನೇ ಜುಲೈ, 2009**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಮನಗರ ಜಿಲ್ಲಾಪಂಚಾಯತಿಗೆ ಮೊದಲನೇ ಕಂತಿನ ಅನುದಾನ ರೂ. 4,50,000ಗಳನ್ನು (ರೂ. ನಾಲ್ಕು ಲಕ್ಷದ ಐವತ್ತು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಭಾಗಶಃ ಅನುದಾನ | ರಾಜ್ಯಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|---|
| 1 | ರಾಮನಗರ | 452 | 0400ZZ0001 | 13,51,000 | 4,50,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯಿತಿಗಳ ಅನುದಾನವನ್ನು ಜಿಲ್ಲಾ ಪಂಚಾಯಿತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ –6–ಜಿಲ್ಲಾ ಪಂಚಾಯತ್ –06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆಎಫ್ ಡಿ 1 ಜಡ್‌ಪಿಎ 2007 (ಪಿ2) ದಿನಾಂಕ:26.4.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋದನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ, ರಾಮನಗರ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ, ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳ, ಜಿಲ್ಲಾ ಪಂಚಾಯತ್, ರಾಮನಗರ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 194 ಪಿಬಿಎಸ್ 2009 ದಿನಾಂಕ:4.7.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1764

**ಡಾ:ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ.

ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕರ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 100 ಸಸಿವಿ 1997, ದಿನಾಂಕ :17.6.1997.
2. ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 19 ಸಸಿವಿ 2004, ದಿನಾಂಕ :19.11.2004.
3. ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 570 ಸಅಸೇ 2008, ದಿನಾಂಕ :7.7.2008.
4. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ :ಕಾಇ 46 ಸಿಎಲ್‌ಸಿ 2009.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಬಾಲಕಾರ್ಮಿಕರ ಕಲ್ಯಾಣಕ್ಕಾಗಿ ಬಾಲ ಕಾರ್ಮಿಕ ಕೋಶವನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:18.6.2008 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರ. ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3 | ಸಹಾಯಕರು | 2 ಹುದ್ದೆಗಳು |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ವಾಹನ ಚಾಲಕರು | 1 ಹುದ್ದೆ |
| 6 | ಗ್ರೂಪ್–ಡಿ | 1 ಹುದ್ದೆ |

ಮೇಲೆ (4) ರಲ್ಲಿ ಓದಲಾದ ಕಾರ್ಮಿಕ ಇಲಾಖೆಯ ಕಡತದಲ್ಲಿ ಒಂದು ವರ್ಷದ ಅವಧಿಗೆ ಬಾಲ ಕಾರ್ಮಿಕ ಕೋಶವನ್ನು ಮೇಲೆ ತಿಳಿಸಿರುವ ಹುದ್ದೆಗಳೊಂದಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 343 ಸಅಸೇ 2009, ಬೆಂಗಳೂರು, ದಿನಾಂಕ:10ನೇ ಜುಲೈ, 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ:18.6.2009 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ. ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2 | ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3 | ಸಹಾಯಕರು | 2 ಹುದ್ದೆಗಳು |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ವಾಹನ ಚಾಲಕರು | 1 ಹುದ್ದೆ |
| 6 | ಗ್ರೂಪ್–ಡಿ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್ ಡಿ 1 ಟಿಎಫ್‌ಪಿ 96, ದಿನಾಂಕ:10.7.1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1766

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2009–10ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ :ಲಾ 32 ಎಲ್ ಸಿಎಲ್ 1982 ದಿನಾಂಕ :17/18.3.1983 ಮತ್ತು ತಿದ್ದುಪಡಿ ದಿನಾಂಕ :30.10.1996ರ ಅಧಿಸೂಚನೆ ಸಂಖ್ಯೆ :ಲಾ 112 ಎಲ್‌ಸಿಎಲ್ 1996.
2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ :ಲಾ 120 ಎಲ್‌ಸಿಎಲ್ 2007 ದಿನಾಂಕ :18.2.2008 ಮತ್ತು ಸೇರ್ಪಡೆ ದಿನಾಂಕ :16.5.2008.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್–ಇನ್–ಏಡ್–ಟು–ಬಾರ್ ಅಸೋಸಿಯೇಷನ್ ರೂಲ್ಸ್ 1983 ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ:17/18–03–1983ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು, ದಿನಾಂಕ:30.10.1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ:18.2.2008 ಮತ್ತು ಸೇರ್ಪಡೆ ದಿನಾಂಕ:16.5.2008ರಲ್ಲಿ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು (2007) ರಚಿಸಲಾಗಿದ್ದು, ದಿನಾಂಕ:18.2.2008ರಿಂದ ಜಾರಿಗೆ ಬಂದಿದೆ. ಅದರಂತೆ ಹಣ ಬಿಡುಗಡೆಗಾಗಿ ರಾಜ್ಯದಲ್ಲಿನ ವಿವಿಧ ವಕೀಲರ ಸಂಘಗಳು ಸಹಾಯಾನುದಾನ ಬಿಡುಗಡೆಗಾಗಿ ಒತ್ತಾಯಿಸಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2014–00–105–0–01–051 ಸಾಮಾನ್ಯ ವೆಚ್ಚ (ಯೋಜನೇತರ) ಅಡಿಯಲ್ಲಿ ರೂ. 241.28 ಲಕ್ಷಗಳನ್ನು ಒದಗಿಸಿದೆ. ಅದರಲ್ಲಿ ರೂ. 50.00 ಲಕ್ಷಗಳನ್ನು ವಕೀಲರ ಸಂಘಗಳಿಗೆ ನಿಗಧಿಪಡಿಸಿ ಸದರಿ ಮೊತ್ತದಲ್ಲಿ ವಿವಿಧ ವಕೀಲರ ಸಂಘಗಳಿಗೆ ನಿಯಮಾನುಸಾರ ಸಹಾಯಾನುದಾನ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ತಿಳಿಸಿದೆ.

**ಸರ್ಕಾರದ ಆದೇಶ ಸಂ. ಲಾ 84 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ:15ನೇ ಜುಲೈ, 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ತಿದ್ದುಪಡಿ ನಿಯಮಗಳನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಒಟ್ಟು ರೂ. 41,55,000/– (ರೂಪಾಯಿ ನಲವತ್ತೊಂದು ಲಕ್ಷದ ಐವತ್ತೈದು ಸಾವಿರ ಮಾತ್ರ) ಮೊತ್ತದ ಸಹಾಯಾನುದಾನಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗಧಿಪಡಿಸಲಾಗಿರುವಂತೆ ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗಧಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

| | |
|---|---|
| * ತಾಲ್ಲೂಕು ಮಟ್ಟದ ವಕೀಲರ ಸಂಘ | ರೂ. 20,000/– |
| * ಜಿಲ್ಲಾ ಮಟ್ಟದ ವಕೀಲರ ಸಂಘ | ರೂ. 35,000/– |
| * ವಿಭಾಗೀಯ ಮಟ್ಟದ ವಕೀಲರ ಸಂಘ | ರೂ. 50,000/– |
| * ಬೆಂಗಳೂರು ವಕೀಲರ ಸಂಘ | ರೂ. 1,25,000/– |

ಹಿಂದಿನ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೇ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಅಧ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–105–0–01–051 ಸಾಮಾನ್ಯ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 322 ವೆಚ್ಚ–10/2009 ದಿನಾಂಕ:25.6.2009ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹಾಗೂ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿರುವ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.1996ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರದ ಆದೇಶ ಲಾ 84 ಎಲ್‌ಸಿಎಲ್ 2009, ದಿನಾಂಕ:15.07.2009**

**ಅನುಬಂಧ**

**ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2009–10ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು**

| ಕ್ರ.ಸಂ. | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆ ಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರು ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1 | ಬೆಂಗಳೂರು ನಗರ ವಕೀಲರ ಸಂಘ | – | 1(ಆನೇಕಲ್) | 1,45,000–00 |
| 2 | ಬೆಂಗಳೂರು (ಗ್ರಾಮಾಂತರ) | – | 4 | 80,000–00 |
| 3 | ರಾಮನಗರ ಜಿಲ್ಲೆ | 1 | 3 | 95,000–00 |
| 4 | ಕೋಲಾರ | 1 | 6 | 1,55,000–00 |
| 5 | ಚಿಕ್ಕಬಳ್ಳಾಪುರ | 1 | 4 | 1,15,000–00 |
| 6 | ತುಮಕೂರು | 1 | 9 | 2,15,.000–00 |
| 7 | ಮೈಸೂರು | 1(ವಿ.ಮ) | 6 | 1,70,000–00 |
| 8 | ಚಾಮರಾಜನಗರ | 1 | 3 | 95,000–00 |
| 9 | ಮಂಡ್ಯ | 1 | 6 | 1,55,000–00 |
| 10 | ಹಾಸನ | 1 | 7 | 1,75,000–00 |
| 11 | ಶಿವಮೊಗ್ಗ | 1 | 6 | 1,55,000–00 |
| 12 | ಚಿಕ್ಕಮಗಳೂರು | 1 | 6 | 1,55,000–00 |
| 13 | ಚಿತ್ರದುರ್ಗ | 1 | 5 | 1,35,000–00 |
| 14 | ದಾವಣಗೆರೆ | 1 | 5 | 1,35,000–00 |
| 15 | ಬಳ್ಳಾರಿ | 1 | 6 | 1,55,000–00 |
| 16 | ಬೆಳಗಾಂ | 1(ವಿ.ಮ) | 11 | 2,70,000–00 |
| 17 | ಬಿಜಾಪುರ | 1 | 4 | 1,15,000–00 |
| 18 | ಬಾಗಲಕೋಟೆ | 1 | 6 | 1,55,000–00 |
| 19 | ಧಾರವಾಡ | 1 | 3 | 95,000–00 |
| 20 | ಹಾವೇರಿ | 1 | 6 | 1,55,000–00 |
| 21 | ಗದಗ್ | 1 | 4 | 1,15,000–00 |
| 22 | ಉತ್ತರ ಕನ್ನಡ | 1 | 10 | 2,55,000–00 |
| 23 | ಬೀದರ್ | 1 | 4 | 1,15,000–00 |
| 24 | ಗುಲ್ಬರ್ಗ | 1(ವಿ,ಮ) | 10 | 2,50,000–00 |
| 25 | ರಾಯಚೂರು | 1 | 4 | 1,15,000–00 |
| 26 | ಕೊಪ್ಪಳ | 1 | 3 | 95,000–00 |
| 27 | ದಕ್ಷಿಣ ಕನ್ನಡ | 1 | 5 | 1,35,000–00 |
| 28 | ಉಡುಪಿ | 1 | 2 | 75,000–00 |
| 29 | ಕೊಡಗು | 1 | 2 | 75,000–00 |
| | **ಒಟ್ಟು** | | | **41,55,000–00** |

**ಶಕುಂತಲ ಹೆಚ್.ಆರ್.**

ಪಿ.ಆರ್. 1774

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಸಿಬ್ಬಂದಿ ವರ್ಗದವರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಅಳವಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ :ಡಿಪಿಎಆರ್ (ಬಿಪಿಇ) 13 ಎಆರ್‌ಯು 2001, ದಿನಾಂಕ :10.8.2001.
2. ಸರ್ಕಾರಿ ಆದೇಶ ಸಂಖ್ಯೆ :ವಾಕೈ 40 ರೇಉನಿ 2007, ದಿ :24.7.2008.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ :ಕರೇಮಾಮ/ಆಡಳಿತ/ಎ1/2008–09/807,ದಿನಾಂಕ :18.9.2008 ಹಾಗೂ 27.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದಲ್ಲಿ ಸಾರ್ವಜನಿಕ ವಲಯ ಉದ್ದಿಮೆಗಳ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ನಿವೃತ್ತಿ ನೀಡುವುದಕ್ಕೆ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ. ಸದರಿ ಮಾರ್ಗಸೂಚಿಯನ್ವಯ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ವಿವಿಧ ವೃಂದಗಳ ಒಟ್ಟು 35 ಅಧಿಕಾರಿ/ನೌಕರರಿಗೆ ದಿನಾಂಕ:31.7.2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಅನುಮತಿ ನೀಡಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರಗಳಲ್ಲಿ ಮಂಡಳಿಯಲ್ಲಿ ಇನ್ನೂ ಹೆಚ್ಚಿನ ದಕ್ಷತೆಗಾಗಿ ಮತ್ತು ವಹಿವಾಟಿಗೆ ಅನುಗುಣವಾಗಿ ಸಿಬ್ಬಂದಿ ವರ್ಗವನ್ನು ಸರಿದೂಗಿಸಲು 2ನೇ ಬಾರಿ ಸ್ವಯಂ ನಿವೃತ್ತಿ ಯೋಜನೆಯನ್ನು ಅಳವಡಿಸಲು ತೀರ್ಮಾನಿಸಿ, ವಿವಿಧ ವೃಂದಗಳಲ್ಲಿ 28 ಸಿಬ್ಬಂದಿಯನ್ನು ಹೆಚ್ಚುವರಿಯೆಂದು ಗುರುತಿಸಿದ್ದು, ಅದರನ್ವಯ ಸ್ವಯಂ ನಿವೃತ್ತಿಗಾಗಿ ಅರ್ಜಿ ಸಲ್ಲಿಸಿದ 11 ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ನೀಡುವುದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಸರ್ಕಾರವನ್ನು ಕೋರಿರುತ್ತಾರೆ.

ಸಾರ್ವಜನಿಕ ಉದ್ದಿಮೆಗಳ ವಲಯಗಳ ಉದ್ದಿಮೆಯ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಜಾರಿಗೊಳಿಸಲಾಗಿದೆ. ಈ ಯೋಜನೆಯನ್ವಯ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ತನ್ನ ಮಂಡಳಿಯಲ್ಲಿ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿರುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರಗಳಲ್ಲಿ ತಿಳಿಸಿದ್ದು, ಸದರಿ ಪತ್ರಗಳಲ್ಲಿಯ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಸ್ವಯಂ ನಿವೃತ್ತಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನಷ್ಟದಲ್ಲಿರುವುದರಿಂದ ಅದರ ಒಟ್ಟು 11 ವಿವಿಧ ವೃಂದಗಳ ಅಧಿಕಾರಿ/ನೌಕರರಿಗೆ 2ನೇ ಬಾರಿ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ನೀಡಲು ಅನುಮತಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 40 ರೇಉನಿ 2007(ಭಾಗ), ಬೆಂಗಳೂರು, ದಿನಾಂಕ:18ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ (ಬಿಪಿಇ) 13 ಎಆರ್‌ಯು 2001, ದಿನಾಂಕ:11.8.2001ರಲ್ಲಿಯ ಷರತ್ತುಗಳನ್ನು ಪೂರೈಸಬೇಕೆನ್ನುವ ಷರತ್ತಿಗೊಳಪಟ್ಟು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ವಿವಿಧ ವೃಂದಗಳ ಒಟ್ಟು 11 ಅಧಿಕಾರಿ / ನೌಕರರಿಗೆ ದಿನಾಂಕ:31.7.2009ರ ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ರದ್ದತಿಗಾಗಿ ಹೆಚ್ಚುವರಿಯೆಂದು ಗುರುತಿಸಿರುವ ಹುದ್ದೆಗಳು ದಿನಾಂಕ:31.7.2009ರ ಅಪರಾಹ್ನದಿಂದ ಜಾರಿಗೆ ಬರುವಂತೆ ರದ್ದಾಗುತ್ತವೆ ಮತ್ತು ಅಂತಹ ಹುದ್ದೆಗಳ ಎದುರು ಅಧಿಕಾರಿ/ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದಲ್ಲಿ ಅವರಿಗೆ ಸೂಕ್ತ ಪರ್ಯಾಯ ಸ್ಥಳವನ್ನು ನೀಡತಕ್ಕದ್ದು.

ಈ ನೌಕರರ ವಿಶೇಷ ಸ್ವಯಂ ನಿವೃತ್ತಿಗಾಗಿ ಅಗತ್ಯವಿರುವ ಮೊತ್ತವನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ತನ್ನ ಆಂತರಿಕ ಸಂಪನ್ಮೂಲದಿಂದ ಭರಿಸತಕ್ಕದ್ದು. ಈ ಬಗ್ಗೆ ರಾಜ್ಯ ಸರ್ಕಾರದಿಂದ ಯಾವುದೇ ಆರ್ಥಿಕ ಸಹಾಯವನ್ನು ನೀಡಲಾಗುವುದಿಲ್ಲ.

ಯಾವಾಗಲೂ ಒಂದು ಕಾರ್ಪೋರೇಷನ್ನಿನಲ್ಲಿ ಒಂದು ಸಾರಿ ಮಾತ್ರ ಇಂತಹ ಯೋಜನೆಯನ್ನು ಅನುಷ್ಠಾನಗೊಳಿಸಬಹುದೆಂಬ ನಿಯಮ ಪಾಲಿಸುವುದು.

ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳನ್ನು ಅಲ್ಲಿ ಕೆಲಸ ನಿರ್ವಹಿಸುತ್ತಿರುವವರು ಸ್ವಯಂ ನಿವೃತ್ತಿ ಅಥವಾ ಇನ್ನಾವುದೇ ರೀತಿ ನಿವೃತ್ತಿಯಾದ ನಂತರ ಕಡ್ಡಾಯವಾಗಿ ರದ್ದುಪಡಿಸತಕ್ಕದ್ದು.

ಈ ಆದೇಶವನ್ನು ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಟಿಪ್ಪಣಿ ಸಂಖ್ಯೆ:ಡಿಪಿಇ 75 ಎಸ್‌ಪಿಯು 2008, ದಿನಾಂಕ:16.2.2009 ಮತ್ತು ಸಾಉಇ 28 ಎಸ್‌ಪಿಯು 2009, ದಿನಾಂಕ:29.6.2009 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್ ಡಿ/592/ವೆಚ್ಚ–1/2009, ದಿನಾಂಕ:6.5.2009ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1778

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಮೊರಾರ್ಜಿ ದೇಸಾಯಿ ಪದವಿ ಪೂರ್ವ ಕಾಲೇಜುಗಳ ನಿರ್ವಹಣಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಅದೇಶ ಸಂಖ್ಯೆ: ಸಕಇ 33 ಮೊದೇಶಾ 2008 ದಿನಾಂಕ: 7.7.2009.

2) ಪತ್ರ ಸಂಖ್ಯೆ: ಕವಶಿಸಸ/ಸಿಆರ್(ಶಿಕ್ಷಣ)–04/2008–09, ದಿನಾಂಕ: 09.07.2009.

**ಪ್ರಸ್ತಾವನೆ:**

ಈ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಜಿಲ್ಲೆಗೆ ಒಂದರಂತೆ ಒಟ್ಟು 29 ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳನ್ನು ಮಂಜೂರು ಮಾಡಲಾಗಿದೆ. ಈ ಪದವಿ ಪೂರ್ವ ವಸತಿ ಕಾಲೇಜುಗಳು ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವುದಿಲ್ಲವಾದ್ದರಿಂದ ಅವುಗಳ ದೈನಂದಿನ ಆಡಳಿತ ನಿರ್ವಹಣೆ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನೊಳಗೊಂಡ ಸಮಿತಿಯನ್ನು ರಚಿಸುವಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 98 ಮೊದೇಶಾ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |
| 3 | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 4 | ಜಿಲ್ಲಾ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ | ಸದಸ್ಯರು |
| 5 | ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | ಸದಸ್ಯರು |
| 6 | ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 7 | ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ | ಸದಸ್ಯರು |
| 8 | ಪ್ರಾಂಶುಪಾಲರು, ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜು | ಸದಸ್ಯರು |
| 9 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ಕಲ್ಯಾಣ ಇಲಾಖೆ ಸಂಬಂಧಪಟ್ಟ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿ | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿ ನಿರ್ವಹಿಸಬೇಕಾದ ಕಾರ್ಯಗಳು ಈ ಕೆಳಕಂಡಂತಿವೆ:–

(1) ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳ ಆಡಳಿತ ನಿರ್ವಹಣೆ ಮಾಡುವುದು.

(2) ಈ ಕಾಲೇಜುಗಳನ್ನು ಸುಸೂತ್ರವಾಗಿ ನಿರ್ವಹಿಸಲು ಅಗತ್ಯವಾಗಿ ಬೇಕಾಗುವ ಕಟ್ಟಡಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವುದರ ಜೊತೆಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳುವುದು.

(3) ಕಾಲೇಜುಗಳಿಗೆ ಬೇಕಾದ ಬೋಧಕ/ಬೋಧಕೇತರ ಸಿಬ್ಬಂದಿಯನ್ನು ತಾತ್ಕಾಲಿಕವಾಗಿ ನಿಯೋಜನೆ/ಹೊರ ಸಂಪನ್ಮೂಲದ ಆಧಾರದ ಮೇಲೆ ನೇಮಿಸಿಕೊಳ್ಳುವುದು.

(4) ಕಾಲೇಜುಗಳ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸಲು ಅಗತ್ಯ ಕ್ರಮ ಜರುಗಿಸುವುದು.

(5) ಕಾಲೇಜಿನ ಹೆಸರಿನಲ್ಲಿ ಜಿಲ್ಲಾಧಿಕಾರಿಗಳು ಮತ್ತು ಸಂಬಂಧಪಟ್ಟ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳು ಇವರ ಹೆಸರಿನಲ್ಲಿ ಜಂಟಿಯಾಗಿ ಬ್ಯಾಂಕ್ ಖಾತೆ ತೆರೆದು ಹಣಕಾಸಿನ ನಿರ್ವಹಣೆ ಮಾಡುವುದು.

(6) ಈ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಬೇಕಾಗುವ ಅಗತ್ಯ ಸರ್ಕಾರಿ ಜಮೀನು ಅಥವಾ ಖಾಸಗಿ ಜಮೀನನ್ನು ಪಡೆಯುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1821

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1, ಸಮಾಜ ಕಲ್ಯಾಣ ಇಲಾಖೆ.

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** ಚಿತ್ರದುರ್ಗ ತಾಲ್ಲೂಕು, ಕಸಬಾ ಹೋಬಳಿ ಕೆಳಕೋಟೆ ಗ್ರಾಮದ ಸರ್ಕಾರಿ ಕಾಲೇಜಿಗೆ ಸೇರಿದ ಜಮೀನನ್ನು ಸರ್ಕಾರದಿಂದ ಅಂಗೀಕೃತವಾದ ಶೈಕ್ಷಣಿಕ ಉದ್ದೇಶಗಳಿಗೆ ಬಳಕೆ ಮಾಡಿಕೊಳ್ಳಲು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಟಿಇ 18 ಬಿಎಲ್‌ಡಿ 2007/3990 ದಿನಾಂಕ: 15.03.2008.

2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಟಿಇ 18 ಬಿಎಲ್‌ಡಿ 2007/ ದಿನಾಂಕ: 2.2.2009.

3) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಅ.ಸ. ಪತ್ರ ಸಂಖ್ಯೆ ಎಲ್ ಎನ್ ಡಿ/ಸಿಆರ್/ 240/07–08 ದಿನಾಂಕ: 6.5.2009.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಪತ್ರಗಳಲ್ಲಿ ಚಿತ್ರದುರ್ಗ ತಾಲ್ಲೂಕು, ಕಸಬಾ ಹೋಬಳಿ, ಕೆಳಕೋಟೆ ಗ್ರಾಮದ ಸರ್ವೆ ನಂ. 81/2ಪಿ1 ಹಾಗೂ 81/3ಎ ರಲ್ಲಿ ಕ್ರಮವಾಗಿ 7.22 ಹಾಗೂ 4.13 ಎಕರೆ ಒಟ್ಟು 11.35 ಎಕರೆ ಜಮೀನು ಇರುತ್ತದೆ. ಇದರಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಕಟ್ಟಡ ನಿರ್ಮಿಸಲು ಎ.ಐ.ಸಿ.ಟಿ.ಇ. ಯು ನಿಯಮಾವಳಿ ಪ್ರಕಾರ 500 ಎಕರೆ ಜಮೀನಿನ ಅವಶ್ಯಕತೆಯಿದ್ದು, ಗ್ರಂಥಾಲಯ, ಕಟ್ಟಡಕ್ಕಾಗಿ 0.05 ಎಕರೆ ಮತ್ತು ಮೆಟ್ರಿಕ್ ನಂತರ ಎಸ್.ಸಿ. ಎಸ್.ಟಿ./ಬಿ.ಸಿ.ಎಂ. ಹಾಸ್ಟೆಲ್ ಕಟ್ಟಡ ನಿರ್ಮಾಣಕ್ಕಾಗಿ 2.00 ಎಕರೆ ಜಮೀನು ಒಟ್ಟು 7.05 ಎಕರೆ ಅವಶ್ಯಕತೆಯಿದ್ದು, ಸದರಿ ಜಮೀನನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ, ಅಂದರೆ ಪ್ರಿನ್ಸಿಪಾಲರು, ಸರ್ಕಾರಿ ಪಾಲಿಟೆಕ್ನಿಕ್, ಚಿತ್ರದುರ್ಗ ಇವರಿಗೆ ಹಸ್ತಾಂತರಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಆರ್ಥಿಕ ದುರ್ಬಲ ವರ್ಗದವರು ಮತ್ತು ಹಿಂದುಳಿದ ವರ್ಗದವರ ಶ್ರೇಯೋಭಿವೃದ್ಧಿಗಾಗಿ ಸರ್ಕಾರಿ ಕಾಲೇಜಿಗೆ ಸೇರಿದ ಜಮೀನಿನಲ್ಲಿ ಸರ್ಕಾರದಿಂದ ಅಂಗೀಕೃತವಾದ ಶೈಕ್ಷಣಿಕ ಉದ್ದೇಶಗಳಿಗೆ 07 ಎಕರೆ 05 ಗುಂಟೆ ಜಮೀನನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ ಅಂದರೆ ಪ್ರಿನ್ಸಿಪಾಲರು, ಸರ್ಕಾರಿ ಪಾಲಿಟೆಕ್ನಿಕ್, ಚಿತ್ರದುರ್ಗ ಇವರಿಗೆ ವರ್ಗಾಯಿಸಲು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 454 ಯೋಸಕ 2007, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಚಿತ್ರದುರ್ಗ ತಾಲ್ಲೂಕು, ಕಸಬಾ ಹೋಬಳಿ, ಕೆಳಕೋಟೆ ಗ್ರಾಮದ ಸರ್ವೆ ನಂ. 81/2ಪಿ1 ಹಾಗೂ 81/3 ಇದರಲ್ಲಿರುವ ಒಟ್ಟು 11.35 ಎಕರೆ ಸರ್ಕಾರಿ ಕಾಲೇಜಿಗೆ ಸೇರಿದ ಜಮೀನಿನಲ್ಲಿ 7.05 ಎಕರೆಯನ್ನು ಈ ಕೆಳಕಾಣಿಸಿದ ಶೈಕ್ಷಣಿಕ ಉದ್ದೇಶಗಳಿಗಾಗಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಶೈಕ್ಷಣಿಕ ಉದ್ದೇಶ | ವಿಸ್ತೀರ್ಣ ಎ. ಗುಂ |
|---|---|---|
| 1 | ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನಿರ್ಮಾಣ | 5.00 |
| 2 | ಗ್ರಂಥಾಲಯ ಕಟ್ಟಡ | 0.05 |
| 3 | ಎಸ್.ಸಿ. ಎಸ್.ಟಿ. ಮತ್ತು ಬಿ.ಸಿ.ಎಂ. ಮೆಟ್ರಿಕ್ ನಂತರದ ಹಾಸ್ಟೆಲ್ ಕಟ್ಟಡ ನಿರ್ಮಾಣ | 2.00 |
| | **ಒಟ್ಟು** | **7.05** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಪಿ.ಆರ್. 1828

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ಕೆ.ಆರ್. ಪೇಟೆಯಲ್ಲಿ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪಿಸಲು ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಗೆ ಸೇರಿದ 10.32 ಎಕರೆ ಜಮೀನನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಇಡಿ 157 ಟಿಇಸಿ 2007 ದಿನಾಂಕ: 27.06.2007.

2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಟಿಇ 04 ಬಿಎಲ್‌ಡಿ 2007 ದಿನಾಂಕ: 16.3.2009.

3) ಪ್ರಿನ್ಸಿಪಾಲರು, ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಕೆ.ಆರ್.ಪೇಟೆ, ಇವರ ಪತ್ರ ಸಂಖ್ಯೆ: ಸ.ಇ.ಕಾ.ಕೆ.ಆರ್.ಪೇ/ಕಟ್ಟಡ/2008–09/556–1 ದಿನಾಂಕ: 3.3.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಪತ್ರದಲ್ಲಿ ಕೆ.ಆರ್. ಪೇಟೆಯಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜು ಸ್ಥಾಪಿಸಲು ಅಲ್ಲಿನ ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಗೆ ಸೇರಿದ ಹೆಚ್ಚುವರಿ 10.35 ಎಕರೆ ಹಸ್ತಾಂತರಿಸಲು ಸರ್ಕಾರದ ಅನುಮತಿ ನೀಡಲಾಗಿತ್ತು.

| ಕ್ರಮ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) |
|---|---|---|
| 1. | 224/1, 2 | 1.39 |
| 2. | 225/3,4,5 | 3.39 |
| 3. | 226/4 | 0.37 |
| 4. | 222 | 4.00 |
| | **ಒಟ್ಟು** | **10.35** |

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರು ಓದಲಾದ (2) ರ ಪತ್ರದಲ್ಲಿ ಸದರಿ ಸ್ಥಳದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ವಿದ್ಯಾರ್ಥಿನಿಲಯವಿದ್ದು, ಎದುರಿನಲ್ಲಿ ಕೆ.ಎಸ್.ಆರ್.ಟಿ.ಸಿ ಡಿಪೋ ಇದೆ. ಈ ಕಾರಣದಿಂದಾಗಿ ವಾಯುಮಾಲಿನ್ಯ ಸಮಸ್ಯೆಯಿರುವುದರಿಂದ ಅಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ನಿರ್ಮಿಸುವುದು ಸೂಕ್ತವಲ್ಲವೆಂಬ ಅಭಿಪ್ರಾಯಕ್ಕೆ ಬಂದು ಈ ವಿಚಾರವನ್ನು ಕೈಬಿಡಲಾಯಿತು. ಹಾಗೂ ಕೆ.ಆರ್. ಪೇಟೆ ಸರ್ಕಾರಿ ಪಾಲಿಟೆಕ್ನಿಕ್ ಪೂರ್ವ ಭಾಗದಲ್ಲಿರುವ ಖಾಲಿ ಜಾಗ ಹಾಗೂ ಪಾಲಿಟೆಕ್ನಿಕ್‌ನ ಶಿಥಿಲಾವಸ್ಥೆಯಲ್ಲಿರುವ ಸಿಬ್ಬಂದಿ ವಸತಿ ಕಟ್ಟಡಗಳನ್ನು ನೆಲಸಮಗೊಳಿಸಿ ಈ ಕೆಳಕಾಣಿಸಿದ ಹನ್ನೊಂದು ಸರ್ವೆ ನಂಬರ್‌ಗಳಲ್ಲಿ ಲಭ್ಯವಿರುವ ಒಟ್ಟು 10 ಎಕರೆ 32 ಗುಂಟೆ ಜಮೀನನ್ನು ಕೆ.ಆರ್. ಪೇಟೆ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ನಿರ್ಮಾಣ ಕಾರ್ಯಕ್ಕಾಗಿ ಹಸ್ತಾಂತರಿಸುವಂತೆ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ಶಿಫಾರಸ್ಸು ಮಾಡಿರುವವರು. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಮೇಲೆ ತಿಳಿಸಿರುವ ನಾಲ್ಕು ಸರ್ವೆ ನಂಬರುಗಳಲ್ಲಿರುವ 10 ಎಕರೆ 35 ಗುಂಟೆ ಜಮೀನಿನ ಬದಲು ಉಲ್ಲೇಖ (3) ರ ಪತ್ರದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಪ್ರಿನ್ಸಿಪಾಲರು ತಿಳಿಸಿರುವಂತೆ ಹನ್ನೊಂದು ಸರ್ವೆ ನಂಬರುಗಳಲ್ಲಿರುವ 10 ಎಕರೆ 32 ಗುಂಟೆ ಜಮೀನನ್ನು ಕೆ.ಆರ್. ಪೇಟೆಯಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯಿಂದ ಕೆ.ಆರ್. ಪೇಟೆಯಲ್ಲಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಹಸ್ತಾಂತರಿಸಲು ಅನುಮತಿ ನೀಡಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) |
|---|---|---|
| 1. | 259/1 | 5.26 |
| 2. | 223 | 1.00 |
| 3. | 222/3 | 0.12 |
| 4. | 221/5 | 0.17 |
| 5. | 221/2 | 0.14 |
| 6. | 221/3 | 0.22 |
| 7. | 260/2 ಎ | 0.14 |
| 8. | 260/3 ಎ | 0.14 |
| 9. | 260/1 | 0.14 |
| 10. | 221/1 | 1.05 |
| 11 | 260/4 ಎ | 0.14 |
| | **ಒಟ್ಟು** | **10.32** |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ, ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 265 ಯೋಸಕ 2008, ಬೆಂಗಳೂರು, ದಿನಾಂಕ: 25ನೇ ಜುಲೈ 2009**

ಕೆ.ಆರ್. ಪೇಟೆ ಸರ್ಕಾರಿ ಪಾಲಿಟೆಕ್ನಿಕ್‌ಗೆ ಸೇರಿದ ಒಟ್ಟು 10 ಎಕರೆ 32 ಗುಂಟೆ ಜಮೀನನ್ನು ಕೆ.ಆರ್. ಪೇಟೆ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರವು ಹಸ್ತಾಂತರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) |
|---|---|---|
| 1. | 259/1 | 5.26 |
| 2. | 223 | 1.00 |
| 3. | 222/3 | 0.12 |
| 4. | 221/5 | 0.17 |
| 5. | 221/2 | 0.14 |

| ಕ್ರಮ ಸಂಖ್ಯೆ | ಸರ್ವೆ ನಂ. | ವಿಸ್ತೀರ್ಣ (ಎಕರೆ) |
|---|---|---|
| 6. | 221/3 | 0.22 |
| 7. | 260/2 ಎ | 0.14 |
| 8. | 260/3 ಎ | 0.14 |
| 9. | 260/1 | 01.4 |
| 10. | 221/1 | 1.05 |
| 11. | 260/4 ಎ | 0.14 |
| | **ಒಟ್ಟು** | **10.32** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1829

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಪ್ರೊ: ಎಂ.ಎಸ್. ಮೋಹನ್ ಕುಮಾರ್, Department of Civil Engineering, IISc ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು–12, ಇವರನ್ನು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಕಾರ್ಯದರ್ಶಿಯನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ವಿಯಇ 92 ವಿತ್ರಮ 2003 (1) ದಿನಾಂಕ: 23.09.2004

2) ಪ್ರೊ: ಪಿ. ಬಲರಾಮ್, ನಿರ್ದೇಶಕರು, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಐಆರ್.ಕೆ.11. ದಿನಾಂಕ: 22.06.2009, ಮತ್ತು ದಿನಾಂಕ: 20.07.2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದನ್ವಯ ಪ್ರೊ. ಎಂ.ಕೆ. ಸೂರಪ್ಪ, ಡಿಪಾರ್ಟ್‌ಮೆಂಟ್ ಆಫ್ ಮೆಟಲರ್ಜಿ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು, ಇವರನ್ನು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸುತ್ತಿದ್ದ ಪ್ರೊ: ಎಂ.ಕೆ. ಸೂರಪ್ಪರವರು ಪಂಜಾಬಿನ ರೂಪಾರ್ ನಲ್ಲಿರುವ Indian Institute of Technology ಸಂಸ್ಥೆಯಲ್ಲಿ ನಿರ್ದೇಶಕರಾಗಿ ನೇಮಕಗೊಂಡ ಪ್ರಯುಕ್ತ ಮಂಡಳಿಯ ಕಾರ್ಯದರ್ಶಿಯ ಹುದ್ದೆ ಖಾಲಿಯಾಗಿರುವುದರಿಂದ ಈ ಹುದ್ದೆಗೆ ಭಾರತೀಯ ವಿಜ್ಞಾನ ಸಂಸ್ಥೆಯ ಸಿವಿಲ್ ಇಂಜಿನಿಯರಿಂಗ್ ವಿಭಾಗದ ಪ್ರೊ: ಎಂ.ಎಸ್. ಮೋಹನ್ ಕುಮಾರ್ ರವರನ್ನು ನೇಮಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 14 ವಿತ್ರಮ 2008 (I), ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಕಾರ್ಯದರ್ಶಿಯ ಹುದ್ದೆಗೆ ಪ್ರೊ: ಎಂ.ಎಸ್. ಮೋಹನ್ ಕುಮಾರ್ Department of Civil Engineering, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1834

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 72 ಶಿಸನೇ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 72 ಶಿಸನೇ 2009, ದಿನಾಂಕ: 03/07/2009 ರಲ್ಲಿನ ವಿಷಯ, ಪ್ರಸ್ತಾವನೆ ಹಾಗೂ ಆದೇಶ ವಿಭಾಗದಲ್ಲಿ ನಮೂದಿಸಿರುವ **"3ನೇ ಹಣಕಾಸು ಆಯೋಗದ ವರದಿಯನ್ನು ಅನುಷ್ಠಾನಗೊಳಿಸಲು"** ಎಂಬುದಕ್ಕೆ

ಬದಲಾಗಿ **"3ನೇ ಹಣಕಾಸು ಆಯೋಗವು ಪಂಚಾಯತ್ ರಾಜ್ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಲು ನೀಡಿರುವ ಶಿಫಾರಸ್ಸುಗಳ ಅನುಷ್ಠಾನಕ್ಕಾಗಿ"** ಎಂಬುದಾಗಿ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 1835

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಸಹಕಾರ ಸಚಿವಾಲಯ

**ವಿಷಯ:** ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸುಸ್ತಿ ಸಾಲಗಳ ಮೇಲಿನ ಬಡ್ಡಿ ದಂಡದ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಒ 65 ಸಿಎಲ್‌ಎಸ್ 2007, ದಿನಾಂಕ: 16.4.2007 ಹಾಗೂ 15.05.2007.
2) ಸರ್ಕಾರಿ ಆದೇಶ ಸಂಖ್ಯೆ: ಸಿಒ 89 ಸಿಎಲ್‌ಎಸ್ 2008, ದಿನಾಂಕ: 5.6.2009.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಎಲ್.ಡಿ.ಬಿ.–2/93/ಎಲ್‌ಎಫ್‌ಸಿ/2007–08 ದಿನಾಂಕ: 03.03.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ರೈತರು ಕೃಷಿ ಪತ್ತಿನ ಸಹಕಾರಿ ಸಂಘ/ಬ್ಯಾಂಕುಗಳಿಂದ ಪಡೆದು ದಿನಾಂಕ: 31.12.2006ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ, ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಅಸಲನ್ನು ದಿನಾಂಕ: 31.05.2007ರೊಳಗೆ ಸಂಬಂಧಪಟ್ಟ ಪತ್ತಿನ ಸಹಕಾರ ಸಂಸ್ಥೆಗಳಿಗೆ ಪೂರ್ತಿಯಾಗಿ ಮರುಪಾವತಿಸಿದಲ್ಲಿ ಬಾಕಿ ಬಡ್ಡಿ ಮತ್ತು ದಂಡದ ಬಡ್ಡಿಯನ್ನು ಮನ್ನಾ ಮಾಡಲು ಮತ್ತು ಈ ರೀತಿ ಮನ್ನಾ ಮಾಡಿದ ಮೊಬಲಗನ್ನು ಕೃಷಿ ಪತ್ತಿನ ಸಹಕಾರ ಸಂಸ್ಥೆಗಳಿಗೆ ಭರ್ತಿ ಮಾಡಿಕೊಡಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (2)ರ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನದ ಬಾಬ್ತು ರೂ. 30.80 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸಿರಗುಪ್ಪ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಬಡ್ಡಿ ದಂಡದ ಬಡ್ಡಿ ಮನ್ನಾ ಕ್ಲೇಮು ರೂ. 2,59,478/– ಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ. 2,59,478/– ಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 54 ಸಿಎಲ್‌ಎಸ್ 2009, ಬೆಂಗಳೂರು, ದಿನಾಂಕ: 27ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಬಡ್ಡಿ, ದಂಡದ ಬಡ್ಡಿ ಮನ್ನಾ ಬಾಬ್ತು ರೂ. 2,59,478/–ಗಳನ್ನು (ರೂಪಾಯಿ ಎರಡು ಲಕ್ಷ ಐವತ್ತೊಂಭತ್ತು ಸಾವಿರದ ನಾಲ್ಕು ನೂರ ಎಪ್ಪತ್ತೆಂಟು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "2425–00–107–2–46– ಸಾಲ ಮನ್ನಾ (ಯೋಜನೇತರ)" ಅಡಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು, ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16.05.2008 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1839

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ವಿಜಾಪುರ, ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಒ 133 ಸಿಎಲ್ಎಂ 2008, ದಿನಾಂಕ: 14.08.2008 ಮತ್ತು 24.03.2009

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–1:117/ಎಸ್ಎಸ್ಎನ್/2006–07 ದಿನಾಂಕ: 11.06.2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿಯಮಿತ, ವಿಜಾಪುರ, ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 23.07.2009ರ ವರೆಗೆ ವಿಸ್ತರಿಸಲಾಗಿರುತ್ತದೆ. ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯಲ್ಲಿ ರೂ. 2,361.49 ಲಕ್ಷ ಸಾಲವನ್ನು ವಸೂಲಿ ಮಾಡಿ ಎನ್.ಪಿ.ಎ. ಪ್ರಮಾಣವನ್ನು ಶೇಕಡಾ 41.81 ರಿಂದ ಶೇ. 20.29ಕ್ಕೆ ತರಲಾಗಿದ್ದು, ಎನ್.ಪಿ.ಎ. ಪ್ರಮಾಣವನ್ನು ಶೇಕಡ 10ರೊಳಗೆ ತರಲು ಹಾಗೂ ಬ್ಯಾಂಕಿನ ಎಲ್ಲಾ ಸದಸ್ಯರುಗಳಿಗೆ ಗುರುತಿನ ಚೀಟಿ ವಿತರಿಸಿ ಆಡಳಿತ ಮಂಡಳಿ ಚುನಾವಣೆ ನಡೆಸಲು ಅನುವಾಗುವಂತೆ ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ: 24.07.2009 ರಿಂದ 31.01.2010ರವರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (2) ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 133 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 27ನೇ ಜುಲೈ 2009**

ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ 24.07.2009 ರಿಂದ 23.01.2010 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ವಿಜಾಪುರ, ಇದಕ್ಕೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1) ರಲ್ಲಿನ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಮೂವತ್ತು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 30 ಉಪಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:23.01.2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪಪ್ರಕರಣ (1)ರಲ್ಲಿನ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1840

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಸಿಐ 114 ಎಸ್‌ಪಿಐ 2007, ಬೆಂಗಳೂರು, ದಿನಾಂಕ: 21ನೇ ಜುಲೈ 2009**

**ವಿಷಯ:** ರಾಜ್ಯ ವಿಶೇಷ ಆರ್ಥಿಕ ವಲಯಗಳ ನೀತಿ – 2009 ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ : ಸಿಐ 114 ಎಸ್‌ಪಿಐ 2007 ದಿ: 28.02.2009.

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಅನುಬಂಧದ ಕಂಡಿಕೆ – III 3 (ii) ರಲ್ಲಿ ವಿದ್ಯುತ್ ಶುಲ್ಕ ಅಥವಾ ತೆರಿಗೆಯಿಂದ ವಿನಾಯಿತಿ ಎಂಬುದಕ್ಕೆ ಬದಲಾಗಿ – **"ವಿದ್ಯುತ್ ತೆರಿಗೆಯಿಂದ ವಿನಾಯಿತಿ"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಬೀರ್ ಹರಿ ಸಿಂಗ್**

ಪಿ.ಆರ್. 1841

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ**

**ಇಡಿ 96 ಯೋಯೋಕ 2009, ಬೆಂಗಳೂರು, ದಿನಾಂಕ: 23ನೇ ಜುಲೈ 2009**

**ವಿಷಯ:** 2009–10ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ವಿದ್ಯಾರ್ಥಿಗಳ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು, ಪ್ರೋತ್ಸಾಹ ಧನವನ್ನು ನೀಡುವಿಕೆ ಸಂಬಂಧದಲ್ಲಿ ಆಗುವ ಖರ್ಚು ವೆಚ್ಚಕ್ಕೆ ಅನುದಾನ ಬಿಡುಗಡೆ ಮಾಡುವ ಬಗೆಗಿನ ಆದೇಶಕ್ಕೆ ತಿದ್ದುಪಡಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಇಡಿ 96 ಯೋಯೋಕ 2009, ದಿನಾಂಕ: 15.06.2009.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರದ ಆದೇಶದಲ್ಲಿನ,

ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

**ಎಂಬುದಕ್ಕೆ ಬದಲಾಗಿ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಮಂಜೂರಾತಿ ನೀಡಲಾಗಿದೆ.

**ಎಂದು ತಿದ್ದಿ ಓದಿಕೊಳ್ಳತಕ್ಕದ್ದು.**

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ಪಿ.ಆರ್. 1844 ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

**ಕಂದಾಯ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಆರ್‌ಡಿ 59 ಎಲ್‌ಆರ್‌ಎಂ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009**

**ವಿಷಯ:** ರೈಲ್ವೆ ಮೆನ್ಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ, ತುಮಕೂರು, ಇವರಿಗೆ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ಗೆದ್ದಲಹಳ್ಳಿ ಹಾಗೂ ಮರಳೂರು ಗ್ರಾಮಗಳ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 4 ಎಕರೆ 36 ಗುಂಟೆ ಜಮೀನನ್ನು ಮಂಜೂರು ಮಾಡಲು ಸರ್ಕಾರದ ಅನುಮತಿ ಕೋರಿ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂ: ಕಂಇ 53 ಎಲ್‌ಆರ್‌ಎಂ 2007 ದಿನಾಂಕ: 21.05.2009.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 53 ಎಲ್‌ಆರ್‌ಎಂ 2007 ದಿನಾಂಕ: 21.05.2009 ರಲ್ಲಿ ಆದೇಶದ ಭಾಗದ ಮೂರನೇ ಪಂಕ್ತಿಯ **"ಕೃಷಿ ಜಮೀನನ್ನು"** ಈ ಪದಗಳ ಮುಂದೆ **"ಶೇಕಡ 50 ರಷ್ಟು"** ಎಂದು ಸೇರಿಸಿಕೊಂಡು ಓದಿಕೊಳ್ಳಲು ತಿದ್ದುಪಡಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣಗೌಡ**

ಪಿ.ಆರ್. 1846 ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಸುಧಾರಣೆ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಶ್ರೀ ಕೆ. ಕೃಷ್ಣರಾಜು, ಗ್ರಾಹಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರಿಂದ ಬರಬೇಕಾದ ಬಾಕಿ ವಸೂಲಿ ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ: ವಾಕೈ 56 ರೇಉನಿ 2006, ದಿನಾಂಕ: 31.1.2007.

2. ರಿಟ್ ಅರ್ಜಿ ಸಂಖ್ಯೆ: 17727/2007 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿದ ದಿನಾಂಕ: 2.7.2009ರ ತೀರ್ಪು.

**ಪ್ರಸ್ತಾವನೆ:**

ಶ್ರೀ ಕೆ. ಕೃಷ್ಣರಾಜು, ಗ್ರಾಹಕರು ರೇಷ್ಮೆ ಉದ್ಯಮವನ್ನು ಮಾಡಿಕೊಂಡಿದ್ದು, ಇವರು ತಮ್ಮ ವ್ಯವಹಾರಗಳನ್ನು ನಡೆಸಲು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯಲ್ಲಿ ಗ್ರಾಹಕರಾಗಿ 1981 ರಲ್ಲಿ ಅವರ ಸ್ಥಿರಾಸ್ತಿ ಆಧಾರದ ಮೇಲೆ ಮಾರಾಟ ಮಂಡಳಿಯಿಂದ ಸಾಲದ ರೂಪದಲ್ಲಿ ರೇಷ್ಮೆ ಖರೀದಿಸುತ್ತಿದ್ದು, ವ್ಯವಹಾರದಲ್ಲಿ ಉಂಟಾದ ಏರುಪೇರಿನಿಂದಾಗಿ ಸಕಾಲದಲ್ಲಿ ಮಂಡಳಿಗೆ ಹಣ ಪಾವತಿ ಮಾಡದೆ 1993 ರಲ್ಲಿ ಸುಸ್ತಿದಾರರಾಗಿರುತ್ತಾರೆ. ಮಂಡಳಿಯು ಸಾಲ ವಸೂಲಿ ಕ್ರಮಗಳನ್ನು ಕಾನೂನು ರೀತಿ ಜರುಗಿಸಿದ್ದು, ಸದರಿಯವರು ಸಿವಿಲ್ ದಾವೆ ಹೂಡಿದ್ದು, ದಾವೆ ಅಂತಿಮವಾಗಿ ಇತ್ಯರ್ಥವಾಗದೆ ಬಾಕಿ ಉಳಿದುಕೊಂಡಿತ್ತು. ಸದರಿ ಗ್ರಾಹಕರು ಸುಮಾರು 12 ವರ್ಷಗಳಲ್ಲಿ ಸತತವಾಗಿ ಮಂಡಳಿಯಲ್ಲಿ ವ್ಯವಹಾರ ಮಾಡಿದ್ದು, ಈ ಅವಧಿಯಲ್ಲಿ ಸುಮಾರು ರೂ. 2.39 ಕೋಟಿ ವ್ಯವಹಾರ ನಡೆಸಿರುತ್ತಾರೆ. 1992–93ನೇ ಸಾಲಿನಲ್ಲಿ ಪಡೆದ ರೇಷ್ಮೆ ಬಾಬ್ತು

ದಿನಾಂಕ: 31.03.1993ರ ಅಂತ್ಯಕ್ಕೆ ರೂ. 8,06,174/– ಬಾಕಿ ಇದ್ದು, ಇದರಲ್ಲಿ ರೂ. 7,23,948/– ಅಸಲು ಮೊತ್ತ ಆಗಿರುತ್ತದೆ. 1996 ರಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಗ್ರಾಹಕರ ಸಾಲ ವಸೂಲಿಗಾಗಿ ಸ್ಥಿರಾಸ್ತಿಯನ್ನು ಹರಾಜು ಮಾಡಲು ಕ್ರಮ ತೆಗೆದುಕೊಂಡಾಗ, ಸದರಿಯವರು ಕರ್ನಾಟಕ ಉಚ್ಚ ನ್ಯಾಯಾಲಯದ ಮೊರೆ ಹೋಗಿ, ನ್ಯಾಯಾಲಯದ ಆದೇಶದಂತೆ ರೂ. 7 ಲಕ್ಷ (ರೂ. ಏಳು ಲಕ್ಷ ಮಾತ್ರ) ವನ್ನು ಜನವರಿ 1997 ರಿಂದ ಜೂನ್ 1997ರ ಅವಧಿಯಲ್ಲಿ ಮಂಡಳಿಗೆ ಜಮಾ ಮಾಡಿರುತ್ತಾರೆ. ಈ ಹಣವನ್ನು ಮಂಡಲಿಯು ಗ್ರಾಹಕರ ಬಾಕಿ ಖಾತೆಯಲ್ಲಿಯ ಬಡ್ಡಿ ಮೊತ್ತಕ್ಕೆ ಜಮಾ ಮಾಡಿಕೊಂಡಿರುತ್ತದೆ. ಇದೊಂದು ಸಿವಿಲ್ ದಾವೆಯಾಗಿದ್ದು, ಕರ್ನಾಟಕ ಉಚ್ಚ ನ್ಯಾಯಾಲಯವು ಈ ವಿಷಯದ ಬಗ್ಗೆ ಪ್ರಕರಣ ಎಂ.ಎಫ್.ಎ. 250/97 ರಲ್ಲಿ 7 ಲಕ್ಷ ರೂಪಾಯಿಗಳನ್ನು ಮಂಡಳಿಯಲ್ಲಿ ಠೇವಣಿ ಇಡಲು ಬಾಕಿದಾರರಿಗೆ ಆದೇಶಿಸಿದೆಯಾದ್ದರಿಂದ, ಮಂಡಲಿಯು ಈ ಹಣವನ್ನು ಬಡ್ಡಿ ಖಾತೆಗೆ ಜಮಾ ಮಾಡಿಕೊಂಡಿರುವುದು ಸರಿಯಾದ ಕ್ರಮವಾಗಿರುವುದಿಲ್ಲ.

ಕರ್ನಾಟಕ ಉಚ್ಚ ನ್ಯಾಯಾಲಯವು ಆದೇಶಿಸಿದಂತೆ ಬಾಕಿದಾರರು ಅಸಲು ಹಣ ರೂ. 7,23,948/– ಗಳಲ್ಲಿ ರೂ. 7 ಲಕ್ಷಗಳನ್ನು ಪಾವತಿಸಿರುವುದರಿಂದ ಉಳಿಕೆ ಅಸಲು ಹಣ ರೂ. 23,948/– ಗಳನ್ನು ಬಾಕಿದಾರರಿಂದ ವಸೂಲು ಮಾಡಿಕೊಳ್ಳಬೇಕಾಗುತ್ತದೆ. ಈಗಾಗಲೇ ಮಂಡಳಿಯು ಹೊರಡಿಸಿರುವ ಒಂದೇ ಬಾರಿ ತೀರುವಳಿ ಯೋಜನೆ (O.T.S.) ಆದೇಶ ಸಂಖ್ಯೆ: ಕೆಎಸ್ಎಂಬಿ/ಆರ್‌ಇಎಲ್ ಎಲ್ಎಸ್/2006–07/647 ದಿನಾಂಕ: 5.8.2006 ರಂತೆ ಈ ಗ್ರಾಹಕರಿಗೂ ಬಡ್ಡಿಯ ರಿಯಾಯಿತಿಯನ್ನು ಕೊಟ್ಟ ಪಕ್ಷದಲ್ಲಿ ಮಂಡಳಿಯು ಹೆಚ್ಚಿನ ಬಡ್ಡಿಯನ್ನು ಕಳೆದು ಕೊಂಡಂತಾಗುವುದಿಲ್ಲವಾದ್ದರಿಂದ ಪ್ರಕರಣದ ಸಾಧಕ ಬಾಧಕ, ಬೇರೆ ಬಾಕಿ ಇರಬಹುದಾದ ಪ್ರಕರಣಗಳ ಮೇಲೆ ಆಗಬಹುದಾದ ಪರಿಣಾಮ, ಸರ್ಕಾರದ ಆದೇಶ ಮತ್ತು ಬಾಕಿದಾರರು ಈಗಾಗಲೇ ನ್ಯಾಯಾಲಯದ ಆದೇಶದಂತೆ ಪಾವತಿಸಿರುವ ಅಸಲು ಹಣವನ್ನು ಗಣನೆಗೆ ತೆಗೆದುಕೊಂಡು ಮಂಡಳಿಗೆ ತೊಂದರೆಯಾಗದ ರೀತಿಯಲ್ಲಿ ಈ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಕ್ರಮಕೈಗೊಳ್ಳುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಪತ್ರದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ನಿರ್ದೇಶಿಸಲಾಗಿತ್ತು. ಸದರಿ ಪತ್ರದಂತೆ ಶ್ರೀ ಕೆ. ಕೃಷ್ಣರಾಜುರವರು ಉಳಿಕೆ ಹಣ ರೂ. 23,948/– ನ್ನು ಪಾವತಿಸಿರುತ್ತಾರೆ ಮತ್ತು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಮೇಲೆ ಸಲ್ಲಿಸಿದ್ದ ರಿಟ್ ಅರ್ಜಿಯನ್ನು ವಾಪಸ್ಸು ಪಡೆದಿರುತ್ತಾರೆ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಉಲ್ಲೇಖ (1)ರಲ್ಲಿನ ಪತ್ರದಲ್ಲಿಯ ಆದೇಶವನ್ನು ಜಾರಿಗೊಳಿಸದೇ ಅವರ ಸ್ಥಿರಾಸ್ತಿಯನ್ನು ಹರಾಜು ಮಾಡಲು ಕ್ರಮ ಜರುಗಿಸಿದ್ದರಿಂದ ಶ್ರೀ ಕೃಷ್ಣರಾಜುರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪುನಃ ರಿಟ್ ಅರ್ಜಿ ದಾಖಲಿಸಿದ್ದು, ಸರ್ಕಾರದ ನಿರ್ದೇಶನವು ಪತ್ರದ ರೂಪದಲ್ಲಿದ್ದು, ಅದು ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ ಹೊರಡಿಸಿದ ಸರ್ಕಾರಿ ಆದೇಶವಲ್ಲವೆಂದು ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 17727/2007ನ್ನು ವಜಾ ಮಾಡಿ ದಿನಾಂಕ: 2.7.2009 ರಂದು ತೀರ್ಪು ನೀಡಿರುತ್ತದೆ. ಶ್ರೀ ಕೆ. ಕೃಷ್ಣರಾಜುರವರು ಸರ್ಕಾರದ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರದ ಪತ್ರದನುಸಾರ ತಮ್ಮ ಅಸಲು ಬಾಕಿ ರೂ. 23,948/– ನ್ನು ದಿನಾಂಕ: 2.2.2007 ರಂದು ಅಂದರೆ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ "ಸಮಾಧಾನ ಸ್ಕೀಂ" ಮುಕ್ತಾಯವಾಗುವ ದಿನಾಂಕ: 13.2.2007ರ ಒಳಗಾಗಿ ಪಾವತಿಸಿರುತ್ತಾರೆಯಾದ್ದರಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಲಿ ಇತರೆ ಗ್ರಾಹಕರಿಗೆ ನೀಡಿರುವ ಬಡ್ಡಿ ಮನ್ನಾ ಸೌಲಭ್ಯವನ್ನು ಶ್ರೀ ಕೆ. ಕೃಷ್ಣರಾಜುರವರಿಗೆ ನೀಡದಿರುವುದು ಸೂಕ್ತವಾಗಿರುವುದಿಲ್ಲ. ಆದ್ದರಿಂದ ವಿಷಯವನ್ನು ಮರುಪರಿಶೀಲಿಸಲಾಗಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಪತ್ರದಲ್ಲಿಯ ಅಂಶಗಳನ್ನು ಅಳವಡಿಸಿ, ಸರ್ಕಾರಿ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 56 ರೇಉನಿ 2006, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2009**

ಶ್ರೀ ಕೆ. ಕೃಷ್ಣರಾಜು, ಗ್ರಾಹಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪ್ರಕರಣದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಪ್ರಕರಣದ ಸಾಧಕ ಬಾಧಕ, ಬೇರೆ ಬಾಕಿ ಇರಬಹುದಾದ ಪ್ರಕರಣಗಳ ಮೇಲೆ ಆಗಬಹುದಾದ ಪರಿಣಾಮ, ಸರ್ಕಾರದ ಆದೇಶ ಮತ್ತು ಬಾಕಿದಾರರು ಈಗಾಗಲೇ ನ್ಯಾಯಾಲಯದ ಆದೇಶದಂತೆ ಪಾವತಿಸಿರುವ ಅಸಲು ಹಣವನ್ನು ಗಣನೆಗೆ ತೆಗೆದುಕೊಂಡು ಮಂಡಳಿಗೆ ತೊಂದರೆಯಾಗದ ರೀತಿಯಲ್ಲಿ ಈ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಈ ಕೆಳಕಂಡಂತೆ ಕ್ರಮಕೈಗೊಳ್ಳುವುದು.

1. ನ್ಯಾಯಾಲಯದ ಆದೇಶದ ಪ್ರಕಾರ ಬಾಕಿದಾರರು ಪಾವತಿಸಿರುವ 7 ಲಕ್ಷ ಠೇವಣಿ ಹಣವನ್ನು ಇವರ ಖಾತೆಯಲ್ಲಿ ಬಾಕಿ ಉಳಿದಿರುವ ಅಸಲು ಮೊತ್ತಕ್ಕೆ ಜಮಾ ಮಾಡಿ ಉಳಿಕೆ ಅಸಲು ಹಣ ರೂ. 23,948/–ಗಳನ್ನು ಬಾಕಿದಾರರು ಪಾವತಿಸಿದ ನಂತರ ಬಾಕಿದಾರರ ಲೆಕ್ಕವನ್ನು ಚುಕ್ತಾ ಮಾಡತಕ್ಕದ್ದು.
2. ಬಾಕಿದಾರರು ಸಿವಿಲ್ ನ್ಯಾಯಾಲಯದಲ್ಲಿ ಹೂಡಿದ್ದ ದಾವೆಯನ್ನು ತಕ್ಷಣವೇ ಹಿಂತೆಗೆದುಕೊಂಡಿರುವುದರಿಂದ ಈ ಬಗ್ಗೆ ಪ್ರಮಾಣ ಪತ್ರವನ್ನು ಮಂಡಳಿಗೆ ಸಲ್ಲಿಸತಕ್ಕದೆಂದು ಅವರಿಗೆ ತಿಳಿಸುವುದು.
3. ಈಗಾಗಲೇ ಸರ್ಕಾರವು ಬೇರೆ ಎಲ್ಲಾ ಗ್ರಾಹಕರಿಗೂ ಏಕಕಾಲಿಕ ತೀರುವಳಿಯ ಕಾಲಾವಧಿಯನ್ನು ದಿನಾಂಕ: 13.2.2007ರವರೆಗೆ ನೀಡಿರುವುದರಿಂದ, ಈ ಪ್ರಕರಣವು ಕೂಡ ಮೇಲ್ಕಂಡ ಅವಧಿಯೊಳಗೆ ಚುಕ್ತಾ ಆಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2100

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.